| | | |
|---|---|---|
| 6. | ಬಾಗಲಕೋಟೆ ಜಿಲ್ಲೆ ಮುಧೋಳ ಪೊಲೀಸ್ ಠಾಣೆ 255/2015 ಕಲಂ 143, 147, 148, 336, 436, 435, 427 ರೆ/ವಿ 149 ಐಪಿಸಿ-1860 | ಪ್ರಕರಣದ ಆರೋಪಿಗಳು ಗಣೇಶ ವಿಸರ್ಜನೆಯ ಕಾಲಕ್ಕೆ ಆದ ಗಲಾಟೆಯ ಸಿಟ್ಟಿನಿಂದ ಪ್ರಕರಣದಲ್ಲಿನ ದೂರುದಾರರು ಹಾಗೂ ಸಾಕ್ಷಿದಾರರ ವಾಹನ ಹಾಗೂ ಅಂಗಡಿಗೆ ಬೆಂಕಿಹಾಕಿ ಹಾನಿ ಮಾಡಿರುತ್ತಾರೆ. |
| 7. | ಬಾಗಲಕೋಟೆ ಜಿಲ್ಲೆ ಮುಧೋಳ ಪೊಲೀಸ್ ಠಾಣೆ 256/2015 ಕಲಂ 143, 147, 457, 380, 436, 427 ರೆ/ವಿ 149 ಐಪಿಸಿ-1860 | ಪ್ರಕರಣದ ಆರೋಪಿಗಳು ಗಣೇಶ ವಿಸರ್ಜನೆಯ ಕಾಲಕ್ಕೆ ಆದ ಗಲಾಟೆಯ ಸಿಟ್ಟಿನಿಂದ ಪ್ರಕರಣದಲ್ಲಿನ ದೂರುದಾರರು ಹಾಗೂ ಸಾಕ್ಷಿದಾರರ ವಾಹನ ಹಾಗೂ ಅಂಗಡಿಗೆ ಬೆಂಕಿಹಾಕಿ ಹಾನಿ ಮಾಡಿರುತ್ತಾರೆ. |
| 8. | ಬಾಗಲಕೋಟೆ ಜಿಲ್ಲೆ ಮುಧೋಳ ಪೊಲೀಸ್ ಠಾಣೆ 257/2015 ಕಲಂ 143, 147, 436, 437, ರೆ/ವಿ 149 ಐಪಿಸಿ-1860 | ಪ್ರಕರಣದ ಆರೋಪಿಗಳು ಫಿರ್ಯಾದಿಯ ಅಂಗಡಿಗಳಿಗೆ ಬೆಂಕಿ ಹಚ್ಚಿ ಸುಟ್ಟು ಹಾನಿಮಾಡಿರುವ ಅಪರಾಧ. |
| 9. | ಬಾಗಲಕೋಟೆ ಜಿಲ್ಲೆ ಮುಧೋಳ ಪೊಲೀಸ್ ಠಾಣೆ 258/2015 ಕಲಂ 143, 147,427, 457, 380 436, ರೆ/ವಿ 149 ಐಪಿಸಿ-1860 | ಪ್ರಕರಣದ ಆರೋಪಿಗಳು ಪಿರ್ಯಾದಿಯ ಅಂಗಡಿಗೆ ಬೆಂಕಿ ಹಚ್ಚಿ ಅಂಗಡಿಯಲ್ಲಿದ್ದ ಸಾಮಾನುಗಳನ್ನು ಸುಟ್ಟು ಹಾಕಿ 40 ಕೋಳಿಗಳು ಮತ್ತು 02 ಗ್ಯಾಸ್ ಸಿಲಿಂಡರಗಳನ್ನು ಕಳವು ಮಾಡಿ ಕೊಂಡು ಹೋದ ಅಪರಾಧ. |
| 10. | ಬಾಗಲಕೋಟೆ ಜಿಲ್ಲೆ ಮುಧೋಳ ಪೊಲೀಸ್ ಠಾಣೆ 259/2015 ಕಲಂ 143, 147, 427, 435 ರೆ/ವಿ 149 ಐಪಿಸಿ-1860 | ಪ್ರಕರಣದ ಆರೋಪಿಗಳು ಪಿರ್ಯಾದಿಯು ಪ್ರಗತಿ ಶಾಲೆಯ ಮುಂದುಗಡೆ ನಿಲ್ಲಿಸಿದ ಕ್ರೂಜರ ವಾಹನ ಹಾಗೂ ಮೋಟಾರ್ ಸೈಕಲ್‌ಗಳಿಗೆ ಬೆಂಕಿ ಹಚ್ಚಿ ಹಾನಿ ಮಾಡಿರುತ್ತಾರೆ. |
| 11. | ಬಾಗಲಕೋಟೆ ಜಿಲ್ಲೆ ಮುಧೋಳ ಪೊಲೀಸ್ ಠಾಣೆ 260/15 ಕಲಂ 143, 147, 427, 435, ರೆ/ವಿ 149 ಐಪಿಸಿ-1860 | ಪಿರ್ಯಾದಿಯ ಕ್ರೂಜರ ಟೋಪಾನ ವಾಹನವನ್ನು ಪ್ರಕರಣದ ಆರೋಪಿಗಳು ಬೆಂಕಿ ಹಚ್ಚಿ ಹಾನಿ ಮಾಡಿರುತ್ತಾರೆ. |
| 12. | ಬಾಗಲಕೋಟೆ ಜಿಲ್ಲೆ ಮುಧೋಳ ಪೊಲೀಸ್ ಠಾಣೆ 262/2015 ಕಲಂ 427 ಐಪಿಸಿ & 3, 4 Prevention of Destruction & Loss of Property Act 1981 | ಪ್ರಕರಣದ ಆರೋಪಿಗಳು ಬಾಗಲಕೋಟೆ ಜಿಲ್ಲೆ ಮುಧೋಳ ನಗರ ಸಭೆಗೆ ಸಂಬಂಧಿಸಿದ ಜನತಾ ಪ್ಲಾಟ್ ಸಂಗೊಳ್ಳಿ ರಾಯಣ್ಣ ಸರ್ಕಲ್ ಹಾಗೂ ಉತ್ತೂರ ಗೇಟ್ ಹಾಗೂ ಚವ್ಹಾಣ ಗ್ಯಾರೇಜ್ ಮುಂದೆ ಇದ್ದ ಬೀದಿ ದೀಪಗಳನ್ನು ಹಾನಿ ಮಾಡಿರುತ್ತಾರೆ. |
| 13. | ಬಾಗಲಕೋಟೆ ಜಿಲ್ಲೆ ಮುಧೋಳ ಪೊಲೀಸ್ ಠಾಣೆ 263/15 ಕಲಂ 143,147,148,427,ರೆ.ವ 149 ಐಪಿಸಿ ಮತ್ತು ಕಲಂ 3 prevention of destruction and loss of public property act 1984 | ಪ್ರಕರಣದ ಆರೋಪಿಗಳು ಮುಧೋಳ ನಗರ ಸಭೆಗೆ ಸಂಬಂಧಿಸಿದ ಸಾಲೀಮಠ ಕಾಂಪ್ಲೆಕ್ಸ್ ಮುಂದೆ ಇರುವ ಒಂದು ಸೋಡಿಯಂ ಲೈಟ್ ಒಡೆದು ಹಾನಿ ಮಾಡಿರುತ್ತಾರೆ. |

18/8/15

| | | |
|---|---|---|
| 14. | ಬಾಗಲಕೋಟೆ ಜಿಲ್ಲೆ ಮುಧೋಳ ಪೊಲೀಸ್ ಠಾಣೆ 264/2015 ಕಲಂ:427, ಐಪಿಸಿ 3,4 Prevention of Destruction & Loss of Property Act 1981 | ಪ್ರಕರಣದ ಆರೋಪಿಗಳು ಮುಧೋಳ ನಗರ ಸಭೆಗೆ ಸಂಬಂಧಿಸಿದ ಸಿಟಿ ಸರ್ವೇ ನಂಬರ್ 3061, 3062ರ ಅಂಗಡಿಗಳನ್ನು ಸುಟ್ಟು ಹಾನಿ ಮಾಡಿರುತ್ತಾರೆ. |
| 15. | ಬಾಗಲಕೋಟೆ ಜಿಲ್ಲೆ ಮುಧೋಳ ಪೊಲೀಸ್ ಠಾಣೆ 265/15 ಕಲಂ:143,147,283,341ರ/ವಿ 149 ಐಪಿಸಿ | ಪ್ರಕರಣದ ಆರೋಪಿಗಳು ಸಂಗೊಳ್ಳಿ ರಾಯಣ್ಣ ಸರ್ಕಲ್ ಹತ್ತಿರ ಸಾರ್ವಜನಿಕ ರಸ್ತೆಯ ಮೇಲೆ ಗಣಪತಿ ವಿಗ್ರಹವನ್ನು ಇಟ್ಟು ಸಾರ್ವಜನಿಕರಿಗೆ ತೊಂದರೆ ಮಾಡಿರುತ್ತಾರೆ. |
| 16. | ಬಾಗಲಕೋಟೆ ಜಿಲ್ಲೆ ಮುಧೋಳ ಪೊಲೀಸ್ ಠಾಣೆ 266/2015 ಕಲಂ:143, 147, 148, 353, 427, 504, 506, ರೆ.ವಿ 149 ಐ.ಪಿ.ಸಿ ಮತ್ತು & 4 Prevantion of distruction And Loss Of Property Ast 1981 | ಪ್ರಕರಣದ ಫಿರ್ಯಾದಿಯು ತಮ್ಮ ಸಿಬ್ಬಂದಿಯೊಂದಿಗೆ ಸರ್ಕಾರಿ ಅಗ್ನಿಶಾಮಕ ಜಲ ವಾಹನವನ್ನು ತೆಗೆದುಕೊಂಡು ಸಂಗೊಳ್ಳಿ ರಾಯಣ್ಣ ಸರ್ಕಲ್ ಹತ್ತಿರ ಬೆಂಕಿಯಿಂದ ಹಾನಿಗೊಳಗಾಗಿದ್ದ ಅಂಗಡಿಗಳಿಗೆ ನೀರು ಹಾಕಿ ಬೆಂಕಿ ಆರಿಸುವಾಗ ಪ್ರಕರಣದ ಆರೋಪಿಗಳು ಬೆಂಕಿ ಆರಿಸುವ ಕಾರ್ಯಕ್ಕೆ ತೊಡಕನ್ನು ಉಂಟುಮಾಡಿ ಅವರುಗಳನ್ನು ನಿಂದಿಸಿ ಜೀವ ಬೆದರಿಕೆಯನ್ನು ಹಾಕಿರುತ್ತಾರೆ ಮತ್ತು ಸರ್ಕಾರಿ ವಾಹನಕ್ಕೆ ಹಾನಿ ಮಾಡಿರುತ್ತಾರೆ. |
| 17. | ಬಾಗಲಕೋಟೆ ಜಿಲ್ಲೆ ಮುಧೋಳ ಪೊಲೀಸ್ ಠಾಣೆ 267/2015 ಕಲಂ: 143, 147, 336, 436, 457, 380, 427, ರೆ.ವಿ 149 ಐ.ಪಿ.ಸಿ | ಪ್ರಕರಣದ ಆರೋಪಿಗಳು ದಿನಾಂಕ: 23.09.2015 ರಂದು ರಾತ್ರಿ ಗಣೇಶ ವಿಸರ್ಜನೆ ಸಂದರ್ಭದಲ್ಲಿ ಹಿಂದೂ ಮುಸ್ಲಿಂ ಕೋಮು ಗಲಭೆ ಮಾಡುತ್ತಾ ಜನತಾ ಪ್ಲಾಟ್ ಹತ್ತಿರ ಇರುವ ದೂರುದಾರರ ಮನೆಗೆ ಕಲ್ಲುಗಳಿಂದ ದಾಳಿಮಾಡಿ ಮನೆಯಲ್ಲಿದ್ದ ಬಂಗಾರದ ಆಭರಣಗಳು ಮತ್ತು ವಾಶಿಂಗ್‌ಮೇಷಿನ್ ಕಳವು ಮಾಡಿರುತ್ತಾರೆ. ಹಾಗೂ ಗೃಹಪಯೋಗಿ ವಸ್ತುಗಳನ್ನು ಸುಟ್ಟು ಹಾನಿ ಮಾಡಿರುತ್ತಾರೆ. |
| 18. | ಬಾಗಲಕೋಟೆ ಜಿಲ್ಲೆ ಮುಧೋಳ ಪೊಲೀಸ್ ಠಾಣೆ 269/2015, ಕಲಂ: 143, 147, 153, 295, 504, 506 ರೆ/ವಿ 149 ಐಪಿಸಿ | ಪ್ರಕರಣದ ಆರೋಪಿಗಳು ಗಣೇಶ ವಿಸರ್ಜನೆಯ ಸಂದರ್ಭದಲ್ಲಿ ಮುಸ್ಲಿಂ ಸಮಾಜದ ಧಾರ್ಮಿಕ ಬಾವನೆಗಳಿಗೆ ಚ್ಯುತಿ ಬರುವಂತೆ ನಡೆದುಕೊಂಡು, ಮಸೀದಿ ಮೇಲೆ ಕಲ್ಲುಗಳನ್ನು ಎಸೆದು ಜೀವ ಬೆದರಿಕೆ ಹಾಕಿರುತ್ತಾರೆ. |
| 19. | ಬಾಗಲಕೋಟೆ ಜಿಲ್ಲೆ ಮುಧೋಳ ಪೊಲೀಸ್ ಠಾಣೆ 270/2015 ಕಲಂ: 143, 147, 436, 427 ರೆ/ವಿ 149 ಐ.ಪಿ.ಸಿ | ಪ್ರಕರಣದ ಆರೋಪಿಗಳು ದಿನಾಂಕ: 23.09.2015 ರಂದು ರಾತ್ರಿ ಗಣೇಶ ವಿಸರ್ಜನೆ ಸಂದರ್ಭದಲ್ಲಿ ಹಿಂದೂ ಮುಸ್ಲಿಂ ಕೋಮು ಗಲಭೆ ಮಾಡುತ್ತಾ ದೂರುದಾರರ ಅಂಗಡಿಗೆ ಬೆಂಕಿ ಹಚ್ಚಿ ಅಂಗಡಿಯಲ್ಲಿದ್ದ ವಸ್ತುಗಳಿಗೆ ಹಾನಿ ಮಾಡಿರುತ್ತಾರೆ. |
| 20. | ಬಾಗಲಕೋಟೆ ಜಿಲ್ಲೆ ಮುಧೋಳ ಪೊಲೀಸ್ ಠಾಣೆ271/2015 ಕಲಂ: 143, 147, 436, 427, ರೆ/ವಿ 149 ಐಪಿಸಿ | ಪ್ರಕರಣದ ಆರೋಪಿಗಳು ದಿನಾಂಕ: 23.09.15 ರಂದು ರಾತ್ರಿ ಗಣೇಶ ವಿಸರ್ಜನೆ ಸಂದರ್ಭದಲ್ಲಿ ನಡೆದ ಹಿಂದೂ ಮುಸ್ಲಿಂ ಕೋಮು ಗಲಭೆ ಮಾಡುತ್ತಾ ದೂರುದಾರರ ಅಂಗಡಿಗೆ ಬೆಂಕಿ ಹಚ್ಚಿ ಹಾನಿ ಮಾಡಿರುತ್ತಾರೆ. |
| 21. | ಬಾಗಲಕೋಟೆ ಜಿಲ್ಲೆ ಮುಧೋಳ ಪೊಲೀಸ್ ಠಾಣೆ 272/2015 ಕಲಂ: 143, 147, 436, 427, ರೆ/ವಿ 149 ಐಪಿಸಿ | ದಿನಾಂಕ: 23.09.2015 ರಂದು ಹಿಂದೂ ಮುಸ್ಲಿಂರ ನಡುವೆ ನಡೆದ ಜಗಳದ ಸಿಟ್ಟಿನಿಂದ ಪ್ರಕರಣದ ಆರೋಪಿಗಳು ಪಿರ್ಯಾದಿಯ ಅಂಗಡಿಗೆ ಬೆಂಕಿ ಹಚ್ಚಿ ಹಾನಿ ಮಾಡಿರುತ್ತಾರೆ. |

| | | |
|---|---|---|
| 22. | ಬಾಗಲಕೋಟೆ ಜಿಲ್ಲೆ ಮುಧೋಳ ಪೊಲೀಸ್ ಠಾಣೆ 276/2015 ಕಲಂ: 143, 147, 148, 436, 427, 504, 506 ರೆ/ವಿ 149 ಐಪಿಸಿ | ಪ್ರಕರಣದ ಆರೋಪಿಗಳು ಗಣೇಶ ವಿಸರ್ಜನೆ ಮೆರವಣಿಗೆಯಲ್ಲಿ ಜನತಾ ಪ್ಲಾಟ್ನಲ್ಲಿರುವ ಅಲಘಲಾ ಮಸೀದಿ ಕಾಂಪ್ಲೆಕ್ಸ್‌ನಲ್ಲಿರುವ ದೂರುದಾರರ ಗ್ಯಾರೇಜ್ ಗೆ ಬೆಂಕಿ ಹಚ್ಚಿ ಅಂಗಡಿಯಲ್ಲಿದ್ದ ಒಟ್ಟು 500000/- ಮೊತ್ತದ ವಸ್ತುಗಳಿಗೆ ಬೆಂಕಿ ಹಚ್ಚಿ ಹಾನಿ ಮಾಡಿರುತ್ತಾರೆ ಹಾಗೂ ಅವಾಚ್ಯ ಶಬ್ದಗಳಿಂದ ಬೈದು ಜೀವದ ಬೆದರಿಕೆ ಹಾಕಿರುತ್ತಾರೆ. |
| 23. | ಬಾಗಲಕೋಟೆ ಜಿಲ್ಲೆ ಮುಧೋಳ ಪೊಲೀಸ್ ಠಾಣೆ329/17 ಕಲಂ 504,506, 189, 505(2) ರೆ/ವಿ34 ಐಪಿಸಿ | ಹಿಂದೂ ಜಾಗರಣ ವೇದಿಕೆಯ ಶಿವಾನಂದ ಮಲ್ಲಪ್ಪ ಬಡಿಗೇರ ಹಾಗೂ ಇನ್ನೂ 8 ಜನರಿಗೆ ಗಡಿಪಾರು ಆದೇಶ ಮಾಡಿದ್ದನ್ನು ವಿರೋಧಿಸಿ ಮುಧೋಳ ಚಲೋ ಕಾರ್ಯಕ್ರಮವನ್ನು ದಿನಾಂಕ 31.08.2017 ರಂದು ಹಮ್ಮಿಕೊಳ್ಳಲಾಗಿದ್ದು ಪ್ರಕರಣದ ಆರೋಪಿ-1 ರವರು ತನ್ನ ಭಾಷಣದಲ್ಲಿ ಕರ್ತವ್ಯ ಮೇಲೆ ಇದ್ದ ಪೊಲೀಸ್ ಅಧಿಕಾರಿಗಳಿಗೆ ಅವಾಚ್ಯ ಶಬ್ದದಿಂದ ಬೈದಿದ್ದಲ್ಲದೇ ಮುಸ್ಲಿಂ ಸಮಾಜದ ಧಾರ್ಮಿಕ ಭಾವನೆಗಳಿಗೆ ಧಕ್ಕೆಯನ್ನುಂಟು ಮಾಡುವ ಉದ್ದೇಶದಿಂದ ಪ್ರಚೋದನಕಾರಿಯಾಗಿ ತನ್ನ ಭಾಷಣ ಮಾಡಿರುತ್ತಾರೆ. ಹಾಗೂ ಆರೋಪಿ-2 ರವರು ಈ ರೀತಿಯ ಭಾಷಣ ಮಾಡಲು ಅವಕಾಶ ಮತ್ತು ಕುಮ್ಮಕ್ಕು ನೀಡಿರುತ್ತಾರೆ. |
| 24. | ಬಾಗಲಕೋಟೆ ಜಿಲ್ಲೆ ಮುಧೋಳ ಪೊಲೀಸ್ ಠಾಣೆ 348/17 ಕಲಂ 323, 332, 353, 504, 511 ರೆ/ವಿ34 ಐಪಿಸಿ | ಹಿಂದೂ ಜಾಗರಣಾ ವೇದಿಕೆಯ ಸದಸ್ಯರಾಗಿರುವ ಪ್ರಕರಣದ ಆರೋಪಿಗಳು ಮುಧೋಳ ಶಹರದ ಶ್ರೀ ಧಾನಮ್ಮದೇವಿ ದೇವಸ್ಥಾನ ಆವರಣದಲ್ಲಿ ಬಂದೋಬಸ್ತ್ ಕರ್ತವ್ಯದಲ್ಲಿದ್ದ ಪೊಲೀಸ್ ಸಿಬ್ಬಂದಿಗಳನ್ನು ಅವಾಚ್ಯ ಶಬ್ದದಿಂದ ನಿಂದಿಸಿ ಸರ್ಕಾರಿ ಕರ್ತವ್ಯ ನಿರ್ವಹಿಸಲು ಅಡ್ಡಿಪಡಿಸಿರುತ್ತಾರೆ. ಹಾಗೂ ಅವರ ಬಳಿಯಿದ್ದ ಹ್ಯಾಂಡಿಕ್ಯಾಮ್‌ಗಳನ್ನು ಕಸಿದುಕೊಳ್ಳಲು ಪ್ರಯತ್ನಿಸಿರುತ್ತಾರೆ. |
| 25. | ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ಪೊಲೀಸ್ ಠಾಣೆ 76/2018 ಕಲಂ 143.147.353.504.506.149 ಐ.ಪಿ.ಸಿ | ದಿನಾಂಕ 19-4-2018 ರಂದು ವಲಯ ಅರಣ್ಯಾಧಿಕಾರಿಗಳ ಕಛೇರಿ ಮೂಡಿಗೆರೆಯಲ್ಲಿ ಕಛೇರಿ ಸಿಬ್ಬಂದಿಗಳಾದ ಸಿ. ಸುರೇಶ ಕ್ಷೇಮಾಭಿವೃದ್ಧಿ ಅಕ್ಷರಸ್ಥ ಸಹಾಯಕ ,ಎಸ್ ಶಿವಲಿಂಗಯ್ಯ, ಕ್ಷೇಮಾಭಿವೃದ್ಧಿ ಅರಣ್ಯ ವೀಕ್ಷಕ , ತಿಮ್ಮೇಗೌಡ ಕ್ಷೇಮಾಭಿವೃದ್ಧಿ ಅರಣ್ಯ ವೀಕ್ಷಕ , ಲಲಿತಮ್ಮ ಕ್ಷೇಮಾಭಿವೃದ್ಧಿ ಅರಣ್ಯ ವೀಕ್ಷಕಿ ದಯಾನಂದ ಪಿಸಿಪಿ ದಿನಗೂಲಿ ವಾಚರ್ ಇವರುಗಳು ಕರ್ತವ್ಯ ನಿರ್ವಹಿಸುತ್ತಿದ್ದಾಗ 15-45 ಗಂಟೆ ಸಮಯದಲ್ಲಿ ಗುತ್ತಿ, ಗುತ್ತಿಹಳ್ಳಿ, ಮೂಲರಹಳ್ಳಿ ಗ್ರಾಮದ ಸುಮಾರು 10-15 ಜನ ಪಾನಮತ್ತರಾಗಿ ಏಕಾಏಕಿ ಕಛೇರಿಗೆ ನುಗ್ಗಿ ಕಾಡಾನೆಗಳು ತೋಟಕ್ಕೆ ಬಂದು ಹಾಳು ಮಾಡುತ್ತಿವೆ, ಗಾರ್ಡ್, ಫಾರೆಸ್ಟರ್ ಯಾರೂ ಬಂದಿರುವುದಿಲ್ಲ ಎಂದು ಹೇಳಿ ಅವ್ಯಾಚ ಶಬ್ದಗಳಿಂದ ಬೈದು ಪೀಠೋಪಕರಣಗಳನ್ನು ಎತ್ತಿ ಬಿಸಾಡುತ್ತಾ ನೀವು ಮರ್ಯಾದೆಯಿಂದ ಹೊರಗಡೆ ಬರುತ್ತೀರೋ ಇಲ್ಲವೋ ಇಲ್ಲವಾದಲ್ಲಿ ನಿಮ್ಮನ್ನು ಕೂಡಿ ಹಾಕಿ ಬೆಂಕಿ ಹಚ್ಚುತ್ತೇವೆಂದು ಧಮಕಿ ಹಾಕಿರುತ್ತಾರೆ, ಸಿಬ್ಬಂದಿಗಳು ಹೊರಗಡೆ ಬಂದಾಗ ಎಳೆದಾಡಿ ಹೊರಗಡೆ ಎಳೆದುಕೊಂಡು ಬಂದು ದೂಡಿರುತ್ತಾರೆ. ಹಾಗೂ ಕಛೇರಿಯ ಬಾಗಿಲುಗಳಿಗೆ ಬೀಗ ಹಾಕಿ ಇಲಾಖೆ ವಿರುದ್ಧ ಕೂಗಾಡಿ ಕರ್ತವ್ಯಕ್ಕೆ ಅಡ್ಡಿಪಡಿಸಿರುತ್ತಾರೆ. |
| 25. | ಮೈಸೂರು ಜಿಲ್ಲೆ ಬೀಚನಹಳ್ಳಿ ಪೊಲೀಸ್ ಠಾಣೆ ಮೊ ಸಂ 06/2019 ಕಲಂ 143, 147, 341, 353, 149 ಐಪಿಸಿ | ದಿನಾಂಕ: 01-02-2019 ರಂದು ಮಧ್ಯಾಹ್ನ 02.00 ಗಂಟೆ ಸಮಯದಲ್ಲಿ ಠಾಣಾ ಸರಹದ್ದು ಮಚ್ಚೂರು ಗೇಟ್ ಬಳಿ ಆರೋಪಿಗಳು ಕಟ್ಟಿಕೊಂಡು ಡಿ.ಬಿ.ಕುಪ್ಪೆ ಗ್ರಾಮದಲ್ಲಿ ಹುಲಿ ದಾಳಿಯಿಂದ ವ್ಯಕ್ತಿ ಮೃತ ಪಟ್ಟ ವಿಚಾರವಾಗಿ ಅಕ್ರಮವಾಗಿ ಗುಂಪು ಹೆದ್ದಾರಿ ರಸ್ತೆಯನ್ನು ಬಂದ್ ಮಾಡಿ ಸಂಚರಿಸುವ ವಾಹನಗಳನ್ನು ತಡೆದು ನಿಲ್ಲಿಸಿ ಪ್ರಯಾಣಿಕರ ಸಂಚಾರಕ್ಕೆ, ಪೊಲೀಸರಿಗೆ & |

| | | |
|---|---|---|
| | | ಅರಣ್ಯ ಇಲಾಖೆಯ ಸಿಬ್ಬಂದಿಗಳ ಕರ್ತವ್ಯಕ್ಕೆ ಅಡಚಣೆಯನ್ನುಂಟು ಮಾಡಿದ್ದು, ಸದರಿಯವರುಗಳ ಮೇಲೆ ಸರ್ಕಾರದ ಪರವಾಗಿ ಸ್ವ ವರದಿಯನ್ನು ತಯಾರಿಸಿ ಪ್ರಕರಣ ದಾಖಲು ಮಾಡಿದೆ. |
| 27. | ತುಮಕೂರು ಜಿಲ್ಲೆ ಗುಬ್ಬಿ ಪೊ.ಠಾ.ಮೊ.ಸಂ. 185/2014 ಕಲಂ 143, 147, 341, 353, 430, 504, ರ/ವಿ 149 ಐಪಿಸಿ | ದಿನಾಂಕ-04-09-2014 ರಂದು ಮಧ್ಯಾಹ್ನ 01-30 ಗಂಟೆಯ ಸಮಯದಲ್ಲಿ ಕಾರೇಹಳ್ಳಿ ಗ್ರಾಮದ ತುಮಕೂರು ಹೇಮಾವತಿ ಶಾಖಾ ನಾಲಾ ಸಂಖ್ಯೆ 477050 ಮೀಟರ್ನಲ್ಲಿರುವ ಎಸ್ಕೇಪ್ ಗೇಡಿನ ಕಾವಲುಗಾರ ವೆಂಕಟೇಶ್ ರಂಬುವರನ್ನು ಪಾರ್ಥಸಾರಥಿ ಬಿಜೆಪಿ ಲೀಡರ್ 1) ಪಂಚಾಕ್ಷರಿ ಬಿಜೆಪಿ ಕಾರ್ಯದರ್ಶೀ, 3) ಸಿದ್ಧಗಂಗಮ್ಮ 4) ಹರಿಪ್ರಸಾದ್, 5) ಬ್ಯಾಲಯ್ಯ, 6) ವೆಂಕಟೇಶ, 7) ಹುಚ್ಚೀರೇಗೌಡ, 8) ಬಸವಣ್ಣ, 09) ಉದಯ ಮೇಳೆಕಲ್ಲಹಳ್ಳಿ, 10)ಸಿದ್ಧನಂಜಯ್ಯ, 11) ಸತೀಶ, 12) ಶಶಿಧರ ತಾಲ್ಲೂಕು ಪಂಚಾಯಿತಿ ಉಪಾಧ್ಯಕ್ಷ, . 13) ಹೆಚ್‌ಟಿ ಭೈರಪ್ಪ, 14) ಚಂದ್ರಶೇಖರ್ ಬಾಬು ಜಿಲ್ಲಾ ಪಂಚಾಯಿತಿ ಸದಸ್ಯರು, 15) ನಾಗರನಹಳ್ಳಿ ನಟರಾಜು ಹಾಗೂ ಇತರ ಸುಮಾರು ಜನ ಅಕ್ರಮವಾಗಿ ಗುಂಪುಕಟ್ಟಿಕೊಂಡು ಬಂದು ಅಡ್ಡಗಟ್ಟಿ ಅವಾಚ್ಯ ಶಬ್ದಗಳಿಂದ ಬೈದು ಕರ್ತವ್ಯಕ್ಕೆ ಅಡ್ಡಿಪಡಿಸಿ ಕಾರೇಹಳ್ಳಿ ಎಸ್ಕೇಪ್ ಗೇಟ್‌ನ ಕೀ ತೆಗೆದುಕೊಂಡು ಗೇಟ್ ಬೀಗ ತೆಗೆದು ಯಾವುದೇ ಸರ್ಕಾರಿ ಆದೇಶವಿಲ್ಲದೇ ಅನಧಿಕೃತವಾಗಿ ಹೇಮಾವತಿ ನೀರನ್ನು ಕಡಬ ಕೆರೆಗೆ ಬಿಟ್ಟಿರುತ್ತಾರೆ. ಆದ್ದರಿಂದ ಸದರಿಯವರುಗಳ ಮೇಲೆ ದೌರ್ಜನ್ಯದಿಂದ ಕೃತ್ಯವೆಸಗಿರುತ್ತಾರೆಂದು ಪ್ರಕರಣ ದಾಖಲಾಗಿರುತ್ತದೆ. |
| 28. | ತುಮಕೂರು ಜಿಲ್ಲೆ ಗುಬ್ಬಿ ಪೊ.ಠಾ.ಮೊ.ಸಂ. 244/16 ಕಲಂ 353. 504. 341. 143. 147. ರ/ವಿ 149 | ದಿನಾಂಕ;07.10.2016 ರಂದು ಸಂಜೆ 5-30 ಗಂಟೆಯಲ್ಲಿ ಈ ಕೇಸಿನ ಪಿರ್ಯಾದಿ ಹೇಮಾವತಿ ಸಹಾಯಕ ಕಾರ್ಯಪಾಲಕ ಇಂಜಿನೀಯರ್ ರವರು ಠಾಣೆಗೆ ಹಾಜರಾಗಿ ನೀಡಿದ ದೂರಿನ ಅಂಶವೇನೆಂದರೆ ದಿನಾಂಕ;04.10.2016 ರಿಂದ ಹೇಮಾವತಿ ನೀರನ್ನು ಹರಿಸಲಾಗುತ್ತಿದ್ದು ಜಿಲ್ಲಾಧಿಕಾರಿಗಳು ತುಮಕೂರು ಜಿಲ್ಲೆ ತುಮಕೂರು ರವರ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ ಸಿ.ವಿ.ಎಲ್ ಸಿ.ಆರ್ /4/2016-17 ದಿನಾಂಕ;05.10.16 ರಲ್ಲಿನ ಸೂಚನೆಯಂತೆ ನಾಲೆಯಲ್ಲಿ ನೀರನ್ನು ಹರಿಸಲಾಗುತ್ತಿದೆ ಗುಬ್ಬಿ ತಾಲ್ಲೂಕ್ ಮಾರಶೆಟ್ಟಿಹಳ್ಳಿ ಗ್ರಾಮದ ಹತ್ತಿರ ತುಶಾನಾ ಸರ 74325ರ ನೇರ ತೂಬು ಗೇಟಿನ ಕಾವಲುಗಾರ ಮಂಜುನಾಥ್ ರವರನ್ನು ನೇಮಿಸಿರುತ್ತೆ ಪೊಲೀಸ್ ಇಲಾಖೆಯಿಂದ ಸಿಬ್ಬಂದಿಯವರನ್ನು ಕೂಡ ನಿಯೋಜಿಸಿದ್ದು ದಿನಾಂಕ;07.10.2016 ರಂದು ಮದ್ಯಾಹ್ನ 1-30 ಗಂಟೆ ಸಮಯದಲ್ಲಿ ನಮ್ಮ ನೌಕರ ಮಂಜುನಾಥ್ ಮತ್ತು ಪೊಲೀಸ್ ಸಿಬ್ಬಂದಿಯವರು ಕರ್ತವ್ಯ ನಿರ್ವಹಿಸುತ್ತಿದ್ದಾಗ ಅಕ್ಕಪಕ್ಕದ ಗ್ರಾಮದ ವಾಸಿಗಳಾದ ರವಿಕುಮಾರ, ಸಿದ್ಧಲಿಂಗಪ್ಪ, ಪರಮೇಶಯ್ಯ, ನಾಗಣ್ಣ ಗೋವಿಂದರಾಪ್, ಗಂಗಣ್ಣ ಹಾಗೂ ಇತರೆ ಸುಮಾರು ಜನರು ಅಕ್ರಮ ಗುಂಪು ಕಟ್ಟಿಕೊಂಡು ಬಂದು ಮಾರಶೆಟ್ಟಿಹಳ್ಳಿ ಹತ್ತಿರ ಇರುವ ನೇರ ತೂಬಿನ ಗೇಟ್ ನ ಕಾವಲಿದ್ದ ಮಂಜುನಾಥ್ ರವರನ್ನು ಅಡ್ಡಗಟ್ಟಿ ತಡೆದು, ಈ ಚಾನಲ್ ನಿಮ್ಮ ಅಪ್ಪನದ ಎಂದು ಅವಾಚ್ಯ ಶಬ್ದಗಳಿಂದ ಬೈಯ್ದು, ಅವರ ಕರ್ತವ್ಯಕ್ಕೆ ಅಡ್ಡಿಪಡಿಸಿ ಅವರ ಹತ್ತಿರ ಇದ್ದ ನೇರ ತೂಬಿನ ಗೇಟ್ ನ ಹ್ಯಾಂಡಲನ್ನು ತೆಗೆದುಕೊಂಡು ಯಾವುದೇ ಸರ್ಕಾರಿ ಆದೇಶವಿಲ್ಲದೆ ಅನಧಿಕೃತವಾಗಿ ಹೇಮಾವತಿ ನಾಲೆಯ ನೀರನ್ನು ಹಳ್ಳದ ಕಡೆ ಬಿಟ್ಟಿರುತ್ತಾರೆ ಇತ್ಯಾದಿಯಾಗಿ ಮೇಲ್ಕಂಡವರ ಮೇಲೆ ಕಾನೂನು ರೀತ್ಯಾ ಕ್ರಮ ಜರುಗಿಸಿ ಎಂತ ನೀಡಿದ ದೂರಿನ ಮೇರೆಗೆ ಗುಬ್ಬಿ ಠಾಣಾ ಮೊನಂ 244/16 ಕಲಂ 353. 504. 341. 143. 147. ರ/ವಿ 149 ಬಾದಂಸಂ ರೀತ್ಯಾ ಪ್ರಕರಣ ದಾಖಲಿಸಿರುತ್ತೆ. |
| 29. | ತುಮಕೂರು ಜಿಲ್ಲೆ ಗುಬ್ಬಿ ಪೊ.ಠಾ.ಮೊ.ಸಂ. 261/2017 | ಗುಬ್ಬಿ ಪಟ್ಟಣ ಪಂಚಾಯತ್‌ನ ಮುಖ್ಯಾಧಿಕಾರಿಗಳಾದ ಶ್ರೀ ಮುನಿಯಪ್ಪ ರವರು ಈ ದಿನ ದಿನಾಂಕ: 19.09.2017 ರಂದು 09.30 |

| | | |
|---|---|---|
| | ಕಲಂ 143, 147, 188, 353, 430, 431, 504 ಐಪಿಸಿ | ಗಂಟೆಗೆ ಠಾಣೆಗೆ ಬಂದು ನೀಡಿದ ಲಿಖಿತ ದೂರಿನ ಅಂಶವೇನೆಂದರೆ, ಗುಬ್ಬಿಯ ಪಟ್ಟಣಕ್ಕೆ ಕುಡಿಯುವ ನೀರಿಗಾಗಿ ಹೇರೂರು ಕೆರೆಗೆ ಸರ್ಕಾರದ ಆದೇಶದಂತೆ ಹೇಮಾವತಿ ನೀರನ್ನು ಸೋಮಲಾಪುರದಿಂದ ಅಮ್ಮನಘಟ್ಟ ತಿಪ್ಪೂರು ಚಾನಲ್ ಮಾರ್ಗವಾಗಿ ನೀರನ್ನು ಹರಿಸುತ್ತಿರುವಾಗ ದಿನಾಂಕ: 18.09.2017 ರಂದು ರಾತ್ರಿ 10.30 ಗಂಟೆ ಸುಮಾರಿಗೆ ಅಮ್ಮನಘಟ್ಟ ಗ್ರಾಮಸ್ಥರಾದ ಆರೋಪಿತರು ಇನ್ನೂ ಇತರರು ಅಕ್ರಮವಾಗಿ ಗುಂಪುಕಟ್ಟಿಕೊಂಡು ಅಮ್ಮನಘಟ್ಟ ಕೆರೆಗೆ ನೀರನ್ನು ಹೇಮಾವತಿ ನಾಲೆಯಿಂದ ಹರಿಸುವ ಉದ್ದೇಶದಿಂದ ಅಮ್ಮನಘಟ್ಟ ಹೇಮಾವತಿ ತೂಬಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಪಟ್ಟಣ ಪಂಚಾಯತ್‌ನ ಸಿಬ್ಬಂದಿಗಳನ್ನು ಹಾಗೂ ಅಲ್ಲಿಯೇ ಕರ್ತವ್ಯ ನಿರ್ವಹಿಸುತ್ತಿದ್ದ ಪೊಲೀಸ್ ಅಧಿಕಾರಿಗಳು ಹಾಗೂ ಸಿಬ್ಬಂದಿಗಳನ್ನು ಅವಾಚ್ಯ ಶಬ್ದಗಳಿಂದ ಬೈಯುತ್ತಾ ಮಾನ್ಯ ಜಿಲ್ಲಾಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ, ಸರ್ಕಾರಿ ನೌಕರರ ಕರ್ತವ್ಯಕ್ಕೆ ಅಡ್ಡಿಪಡಿಸಿ, ಸಾರ್ವಜನಿಕರ ಕುಡಿಯುವ ನೀರಿಗೆ ತೊಂದರೆಯನ್ನುಂಟು ಮಾಡಿ, ಅಮ್ಮನಘಟ್ಟ ಹೇಮಾವತಿ ತೂಬನ್ನು ಆಯುಧಗಳಿಂದ ಒಡೆದುಹಾಕಿ ಅಮ್ಮನಘಟ್ಟ ಕೆರೆಗೆ ನೀರನ್ನು ಹರಿಸಿಕೊಂಡಿರುತ್ತಾರೆ. ಗುಬ್ಬಿ ಟೌನ್ ಕುಡಿಯುವ ನೀರಿಗಾಗಿ ಹೇರೂರು ಕೆರೆಗೆ ಹೇಮಾವತಿ ನಾಲೆಯಿಂದ ನೀರನ್ನು ಹರಿಸಲು ಅಡಚಣೆ ಮತ್ತು ಸರ್ಕಾರಿ ಕರ್ತವ್ಯಕ್ಕೆ ಅಡ್ಡಿ ಉಂಟು ಮಾಡಿರುತ್ತಾರೆ ಎಂಬಿತ್ಯಾದಿಯಾಗಿ ನೀಡಿದ ದೂರಿನನ್ವಯ ಪ್ರಕರಣವನ್ನು ದಾಖಲಿಸಲಾಗಿದೆ. |
| 30. | ತುಮಕೂರು ಜಿಲ್ಲೆ ಚೇಳೂರು ಪೊ.ಠಾ. ಮೊ. ಸಂ. 137/2017 ಕಲಂ. 114, 117, 504, 506 ರೆ/ವಿ 34 ಐಪಿಸಿ | ದಿನಾಂಕ : 04/09/2017 ರಂದು ಬೆಳಿಗ್ಗೆ 11-00 ಗಂಟೆ ಸಮಯದಲ್ಲಿ ಚೇಳೂರು ಪೊಲೀಸ್ ಠಾಣಾ ಸರಹದ್ದು ಚೇಳೂರಿನ ಸರ್ಕಲ್ ನಲ್ಲಿ ಮೇಲ್ಕಂಡ ಆರೋಪಿಗಳು ಹೇಮಾವತಿ ನಾಲಾ ನೀರಿನ ವಿಚಾರವಾಗಿ ಕೆಲವು ಯವರು ಪಂಪ್ ಸೆಟ್ ಗಳ ವಿದ್ಯುತ್ ಕೇಬಲ್ ಕಟ್ ಮಾಡಿದ್ದು ಪುನಃ ಪಂಪ್ ಸೆಟ್ ಗೆ ವಿದ್ಯುತ್ ಕೇಬಲ್ ಅಳವಡಿಸಿಕೊಳ್ಳಿ ಎಂದು ಮತ್ತು ಗುಬ್ಬಿ ವೃತ್ತ ನಿರೀಕ್ಷಕರಿಗೆ ಸಾಮಿಪ್ರಕಾಶ ರವರಿಗೆ ಆದ ರೀತಿ ನಿಮಗೂ ಒಂದು ಗತಿ ಕಾಣಿಸುತ್ತೇನೆ ಎಂದು ಪ್ರಾಣ ಬೆದರಿಕೆ ಹಾಕಿ, ನಾನು ನಿಮ್ಮ ಜೊತೆ ಇದ್ದೇನೆ ನೀರನ್ನು ಹರಿಸಿಕೊಳ್ಳಿ ಎಂದು ಸಾರ್ವಜನಿಕರಿಗೆ ದುಷ್ಕೃತ್ಯ ಎಸಗಲು ದುಷ್ಪ್ರೇರಣೆ ನೀಡಿದ ಆರೋಪಿ ( ಇತರ ಆರೋಪಿಗಳು ಚಪ್ಪಾಳೆ ತಟ್ಟಿ ಪ್ರೋತ್ಸಾಹ ನೀಡಿರುತ್ತಾರೆಂದು ಫಿರ್ಯಾದು ಅಂಶ. |
| 31. | ತುಮಕೂರು ಜಿಲ್ಲೆ ಚೇಳೂರು ಪೊ.ಠಾ.ಮೊ. ಸಂ.142/2017 ಕಲಂ. 143, 147, 353, 504, 506.431 ರೆ/ವಿ 149 ಐಪಿಸಿ | ದಿನಾಂಕ : 15/09/2017 ರಂದು ಬೆಳಿಗ್ಗೆ 10-15 ಗಂಟೆ ಸಮಯದಲ್ಲಿ ಚೇಳೂರು ಪೊಲೀಸ್ ಠಾಣಾ ಸರಹದ್ದು ಸಿ. ನಂದೀಹಳ್ಳಿ ಗ್ರಾಮದ ಬಳಿಯ ಹೇಮಾವತಿ ವಿತರಣಾ ನಾಲೆಯ 17 ನೇ ಎಸ್ಕೇಪ್ ಗೇಟ್ ಬಳಿ ಕಗ್ಗೆರೆ ಕೆರೆಗೆ ನೀರು ಹೋಗುವ ಹೇಮಾವತಿ ನಾಲೆಯ ತೂಬಿನ ಬಳಿಗೆ ಆರೋಪಿಗಳು ಗುಂಪು ಕಟ್ಟಿಕೊಂಡು ಬಂದು ತುಮಕೂರು ನಗರಕ್ಕೆ ಕುಡಿಯುವ ನೀರಿಗಾಗಿ ಬುಗುಡನಹಳ್ಳಿ ಕೆರೆಗೆ ಹೇಮಾವತಿ ನೀರನ್ನು ಹರಿಸಲು ಬಂದೋಬಸ್ತ್ ಕರ್ತವ್ಯಕ್ಕೆ ನಿಯೋಜಿಸಿದ್ದ ಸಾಕ್ಷಿ 1 ರವರಿಗೆ ಲೋಫರ್ ನನ್ನ ಮಗನೇ, ಬೋಳಿ ಮಗನೇ, ಸೂಳೇ ಮಗನೇ ಎಂತ ಅವಾಚ್ಯ ಶಬ್ದಗಳಿಂದ ಬೈಯ್ದು ಸರ್ಕಾರಿ ಕರ್ತವ್ಯಕ್ಕೆ ಅಡ್ಡಿ ಪಡಿಸಿ, ಗೇಟ್ ನ ಹತ್ತಿರ ಬಂದರೆ ನಿನ್ನನ್ನು ಕೊಲೆ ಮಾಡುತ್ತೇವೆಂತ ಬೆದರಿಕೆ ಹಾಕಿ ಕಗ್ಗೆರೆ ಕೆರೆಗೆ ಹೋಗಲು ಇದ್ದಿರುವ ತೂಬನ್ನು ಜಖಂಗೊಳಿಸಿ, ಬುಗುಡನಹಳ್ಳಿ ಕೆರೆಗೆ ಹೋಗುವ ನೀರನ್ನು ಅನಧೀಕೃತವಾಗಿ ಕಗ್ಗೆರೆ ಕೆರೆಗೆ ಬಿಟ್ಟುಕೊಂಡಿರುತ್ತಾರೆಂತ ಅರ್ಜಿ ಅಂಶ. |
| 32. | ತುಮಕೂರು ಜಿಲ್ಲೆ ಚೇಳೂರು ಮೊ.ಸಂ. 144/2017 | ದಿನಾಂಕ : 16/09/2017 ರಂದು ಮಧ್ಯಾಹ್ನ 3-30 ಗಂಟೆ ಸಮಯದಲ್ಲಿ ಚೇಳೂರು ಪೊಲೀಸ್ ಠಾಣಾ ಸರಹದ್ದು ಚೇಳೂರಿನ |

|  |  |  |
|---|---|---|
|  | ಕಲಂ. 143, 147, 353, 341, 114, 504, 506 ರ/ವಿ 149 ಐಪಿಸಿ | ಶಿವಕುಮಾರ ಸ್ವಾಮಿ ಸರ್ಕಲ್ ನಲ್ಲಿ 200 ರಿಂದ 300 ಜನರು ಸೇರಿ ಸರ್ಕಾರಿ ಅಧಿಕಾರಿಗಳು ಕೆಲವು ಕಡೆ ಮಾತ್ರ ಹೇಮಾವತಿ ನಾಲೆಯ ಮೋಟಾರ್ ಗಳನ್ನು ತೆಗೆಸಿ ನಮಗೆ ನೀರು ಬಿಡದೇ ಮತ್ತು ಕರೆಂಟ್ ಕೊಡದೇ ಅನ್ಯಾಯ ಮಾಡಿರುತ್ತಾರಂತ ಗುಂಪು ಕಟ್ಟಿಕೊಂಡು ಪೊಲೀಸರ ವಿರುದ್ಧ ಘೋಷಣೆ ಕೂಗುತ್ತಾ ರಸ್ತೆಯನ್ನು ಬಂದ್ ಮಾಡಿ, ಸರ್ಕಲ್ ನ ನಾಲ್ಕು ಕಡೆ ರಸ್ತೆಗೆ ಅಡ್ಡಲಾಗಿ ಕಟ್ಟಿಗೆ ಮತ್ತು ಟೈರ್ ಗಳನ್ನು ಹಾಕಿ ಬೆಂಕಿ ಹಚ್ಚಿ ಸಾರ್ವಜನಿಕರು ತಿರುಗಾಡದಂತೆ ಅಡ್ಡಿ ಪಡಿಸಿದಾಗ ಸಾಕ್ಷಿ 13 ರವರು ಈ ರೀತಿ ರಸ್ತೆ ತಡೆಯುವುದು ಕಾನೂನು ಬಾಹಿರ ಎಂತ ಹೇಳಿ ಮನವೊಲಿಸಲು ಪ್ರಯತ್ನಿಸಿದಾಗ ಆರೋಪಿ 6 ರವರು ಸಾಕ್ಷಿ 1 ಮತ್ತು 5 ರಿಂದ 13 ರವರೆಗಿನ ಪೊಲೀಸ್ ರಿಗೆ ನಾವು ಸಂಬಂಧಪಟ್ಟ ಅಧಿಕಾರಿಗಳ ಬಳಿ ಹೋಗಿ ಮಾತನಾಡುವವರೆಗೆ ಯಾವ ಅಧಿಕಾರಿಗಳು ನಾಲೆ ಮೇಲೆ ಹೋಗಬಾರದೆಂತಲೂ, ಹೋದರೆ ಪರಿಸ್ಥಿತಿ ನೆಟ್ಟಗಿರುವುದಿಲ್ಲವೆಂತ ಬೆದರಿಕೆ ಹಾಕಿದ್ದಲ್ಲದೇ ಆರೋಪಿಗಳು ಅಲ್ಲಿ ಸೇರಿದ ಜನರಿಗೆ ಪ್ರಚೋದನೆ ನೀಡಿ, ಗಲಾಟೆಗೆ ಕುಮ್ಮಕ್ಕು ನೀಡಿ, ಸಾರ್ವಜನಿಕರ ಸಂಚಾರಕ್ಕೆ ತಡೆ ಉಂಟು ಮಾಡಿದ್ದಲ್ಲೇ ಪೊಲೀಸರಿಗೆ ಕರ್ತವ್ಯಕ್ಕೆ ಅಡ್ಡಿಪಡಿಸಿರುತ್ತಾರೆಂತ ಅರ್ಜಿ ಅಂಶ. |
| 33. | ತುಮಕೂರು ಜಿಲ್ಲೆ ಚೇಳೂರು ಪೊ.ಠಾ.ಮೊ. ಸಂ.146/2017 ಕಲಂ. 143, 147, 323, 283, 188, 341, 353, 504, 506 ರ/ವಿ 149 ಐಪಿಸಿ | ದಿನಾಂಕ : 31/08/2017 ರಂದು ಚೇಳೂರು ಪೊಲೀಸ್ ಠಾಣಾ ಸರಹದ್ದು ಸೋಮಲಾಪುರ ಗ್ರಾಮದ ಸಮೀಪ ಕೃಷ್ಣಪ್ಪ ಬಿನ್ ತಿಮ್ಮಶೆಟ್ಟಿ ರವರ ಮನೆಯ ಮುಂಭಾಗ ಹಾದು ಹೋಗಿರುವ ಹೇಮಾವತಿ ನಾಲೆಯಿಂದ ಸೋಮಲಾಪುರ ಕೆರೆಗೆ ನೀರು ಹೋಗುವ ತೂಬನ್ನು ಹೇಮಾವತಿ ಅಧಿಕಾರಿಗಳು ವೆಲ್ಡ್ ಮಾಡಿಸಲು ಹೋದಾಗ ಆರೋಪಿಗಳು ಮುಚ್ಚಬೇಡಿ ಎಂದು ಪ್ರತಿರೋಧ ಮಾಡುತ್ತಿದ್ದು, ಅದರಲ್ಲಿ ಚೆಲುವರಾಜ ಎಂಬಾತನು ಹೇಮಾವತಿ ನಾಲೆಗೆ ಬಿದ್ದು ನೀರಿನಲ್ಲಿ ಮುಳುಗಿದ್ದು, ಈ ಹಿನ್ನಲೆಯಲ್ಲಿ ಆರೋಪಿಗಳು ಅಕ್ರಮ ಗುಂಪು ಕಟ್ಟಿಕೊಂಡು ಜಿಲ್ಲಾಧಿಕಾರಿಗಳು ಜಾರಿ ಮಾಡಿರುವ ನಿಷೇದಾಜ್ಞೆಯನ್ನು ಉಲ್ಲಂಘಿಸಿ ಚೆಲುವರಾಜ ಎಂಬುವನನ್ನು ಬಲಿ ತೆಗೆದುಕೊಂಡಿರಿ ನಿಮ್ಮಗಳನ್ನು ಸುಮ್ಮನೆ ಬಿಡುವುದಿಲ್ಲ, ಪಿರ್ಯಾದಿ ಮತ್ತು ಇತರೆಯವರನ್ನು ಹಿಡಿದುಕೊಳ್ಳಿ ಚಾನಲ್ ಗೆ ಹಾಕೋಣ ಎಂದು ಅವಾಚ್ಯ ಶಬ್ದಗಳಿಂದ ಬೈಯ್ದು, ಸರ್ಕಾರಿ ಕೆಲಸಕ್ಕೆ ಅಡ್ಡಿಪಡಿಸಿ ಪೊಲೀಸ್ ಅಧಿಕಾರಿಗಳನ್ನು ಬೈಯ್ದು ಗಲಾಟೆ ಮಾಡಿ, ಅವರ ಕರ್ತವ್ಯಕ್ಕೆ ಅಡ್ಡಿಪಡಿಸಿ ನಿಟ್ಟೂರು ಚೇಳೂರು ರಸ್ತೆಯನ್ನು ಬಂದ್ ಮಾಡಿ, ರಸ್ತೆಯಲ್ಲಿ ಟೈರ್ ಗಳಿಗೆ ಬೆಂಕಿ ಹಚ್ಚಿ, ಸಾರ್ವಜನಿಕರು ಮತ್ತು ಸಾರ್ವಜನಿಕ ವಾಹನಗಳು ಓಡಾಡದಂತೆ ಅಡ್ಡಿಪಡಿಸಿರುತ್ತಾರೆ. |
| 34. | ತುಮಕೂರು ಜಿಲ್ಲೆ ಚೇಳೂರು ಪೊ.ಠಾ.ಮೊ. ಸಂ. 147/2017 ಕಲಂ. 430 ಐಪಿಸಿ | ದಿನಾಂಕ : 20/09/2017 ರಂದು ಬೆಳಿಗ್ಗೆ 11-00 ಗಂಟೆ ಸಮಯದಲ್ಲಿ ಚೇಳೂರು ಪೊಲೀಸ್ ಠಾಣಾ ಸರಹದ್ದು ಸಿ. ನಂದೀಹಳ್ಳಿ ಗ್ರಾಮದ ಸಮೀಪ ಹಾದು ಹೋಗಿರುವ ಹೇಮಾವತಿ ನಾಲೆಯಲ್ಲಿ ಸರ್ಕಾರವು ಕುಡಿಯುವ ನೀರಿಗಾಗಿ ಆಯ್ದ ಕೆರೆಗಳಿಗೆ ನೀರನ್ನು ಹರಿಸುತ್ತಿದ್ದು, ಆರೋಪಿಗಳು ನೀರು ಹರಿಸುತ್ತಿದ್ದ ಹೇಮಾವತಿ ಚಾನಲ್ ಗೆ 45 ಪ್ಲಾಸ್ಟಿಕ್ ಜೇಡ್ ಪೈಪ್ ಗಳನ್ನು ಹಾಕಿ ಹೇಮಾವತಿ ಚಾನಲ್ ನಿಂದ ಸುಮಾರು 1 ರಿಂದ 2 ಕ್ಯೂಸೆಕ್ ನೀರನ್ನು ಹತ್ತಿರದ ಕೆರೆಗೆ ಅಕ್ರಮವಾಗಿ ಹರಿಸಿರುತ್ತಾರೆಂತ ಅರ್ಜಿ ಅಂಶ. |
| 35. | ತುಮಕೂರು ಜಿಲ್ಲೆ ದಂಡಿನಶಿವರ ಪೊ.ಠಾ. ಮೊ.ಸಂ. | ದಿನಾಂಕ. 15/09/2017 ರಂದು ಆರೋಪಿಗಳು ಹೇಮಾವತಿ ನದಿ ನೀರನ್ನು ತಮ್ಮ ಕೆರೆಗಳಿಗೆ ಹರಿಸಬೇಕೆಂದು ಗಲಾಟೆ ಮಾಡಿ |

| | | |
|---|---|---|
| | 99/2017 ಕಲಂ 143, 147,504, 353, 149 ಐಪಿಸಿ | ಜಿಲ್ಲಾಧಿಕಾರಿಗಳ ನಿಷೇಧಾಜ್ಞೆ ಆದೇಶ ಇದ್ದರೂ ಸಹ ಅದನ್ನು ಉಲ್ಲಂಘಿಸಿ ಸ್ಲೂಯಿಜ್ ನೀರು ಹೋಗದಂತೆ ಹಾಕಿದ್ದ ಮರಳಿನ ಚೀಲಗಳನ್ನು ತೆಗೆದು ಹಾಕಿ ಸ್ಥಳದಲ್ಲಿದ್ದ ಅಧಿಕಾರಿಗಳಿಗೆ ಸರ್ಕಾರಿ ಕೆಲಸಕ್ಕೆ ಅಡ್ಡಿ ಪಡಿಸಿರುತ್ತಾರೆ. |
| 36 | ತುಮಕೂರು ಜಿಲ್ಲೆ ಅಮೃತೂರು ಪೊ.ಠಾ.ಮೊ. ಸಂ. 191/2014 ಕಲಂ-143,341,342,353 ರ/ವಿ 149 ಐಪಿಸಿ | ದಿನಾಂಕ 16.09.2014 ರಂದು ಬೆಳಿಗ್ಗೆ 11.00 ಯಿಂದ ರೈತ ಮುಖಂಡರಾದ ಶ್ರೀ ಆನಂದ್ ಪಟೇಲ್ ಹಾಗೂ ಇತರೆ ನೂರಾರು ಬೆಂಬಲಿಗರೊಂದಿಗೆ, ಹೇಮಾವತಿ ಕಛೇರಿಗೆ, ಯಾವುದೇ ಮುನ್ಸೂಚನೆ ನೀಡದೇ, ಕಛೇರಿ ಮುಂಭಾಗದಲ್ಲಿ ಪೆಂಡಾಲ್ ಹಾಕಿ, ಕಛೇರಿ ಸಿಬ್ಬಂದಿಯವರನ್ನು ಹೊರಹಾಕಿ ಕಛೇರಿಗೆ ಬೀಗ ಹಾಕಿ, ದೈನಂದಿನ ಕೆಲಸ ಕಾರ್ಯಗಳಿಗೆ ಅಡಚಣೆ ಉಂಟುಮಾಡಿ, ಸಂಬಂದಿಸಿದ ಮೇಲಾಧಿಕಾರಿಗಳಿಗೆ ದಿಗ್ಬಂದ ಹಾಕಿರುವ ಬಗ್ಗೆ ಇತ್ಯಾದಿ, |
| 37 | ಹುಬ್ಬಳ್ಳಿ-ಧಾರವಾಡ ಕಮೀಷನರೇಟ್ ವಿದ್ಯಾಗಿರಿ ಪೊ.ಠಾ.ಮೊ.ಸಂ 59/2018 ಕಲಂ 171(ಇ) ಐಪಿಸಿ | ಇದರಲ್ಲಿ ಆರೋಪಿ ಯಲ್ಲಪ್ಪ ಮಹಾದೇವಪ್ಪ ಅರಾವಾಳದ ಈತನು ಬಿಜೆಪಿಯ ಸಪಶಕ್ತಿಯ ಸಮಾವೇಶ ನಡೆಸಿ ನಂತರ 21.30 ಗಂಟೆಯಿಂದ 22.30 ಗಂಟೆಯ ನಡುವಿನ ಅವಧಿಯಲ್ಲಿ ವಿಧಾನಸಭಾ ಚುನಾವಣೆ 2018 ನೀತಿ ಸಂಹಿತೆ ಉಲ್ಲಂಘನೆ ಮಾಡಿ ಸಮಾವೇಶಕ್ಕೆ ಬಂದ ಸಾರ್ವಜನಿಕರಿಗೆ ಊಟದ ಹಂಚಿಕೆ ಮಾಡಿದ ಅಪರಾಧ. |
| 38 | ಹುಬ್ಬಳ್ಳಿ-ಧಾರವಾಡ ಕಮೀಷನರೇಟ್ ವಿದ್ಯಾಗಿರಿ ಪೊ.ಠಾ.ಮೊ.ಸಂ.60/2018 ಕಲಂ. 171(ಸಿ), 171(ಹೆಚ್) | ಆರೋಪಿತರು ಬಿಜೆಪಿ ಪಕ್ಷದ ವಿಧಾನಸಭಾ ಕ್ಷೇತ್ರ-74ದ ಶ್ರೀ ಅರವಿಂದ ಬೆಲ್ಲದ ಇವರ ಸಂಪಾದ ಕಾರ್ಯಕ್ರಮ ಏರ್ಪಡಿಸಿ ಜಿಲ್ಲಾ ಎಂ.ಸಿ.ಎಂ.ಸಿ ಎಲ್ಇಡಿ ಲೈಟಿನ ವಿಡಿಯೋ ತುಣುಕು ಪ್ರದರ್ಶನಕ್ಕೆ ಅನುಮತಿ ಪಡೆಯದೆ ಪ್ರದರ್ಶನ ಮಾಡಿದ್ದು ಅಲ್ಲದೇ ಶ್ರೀ ರಾಜು ಕೋಟೆಣ್ಣನವರ ಇವರ ಮಗ ಭೀಮರಾವ್ ಇತನ ಹುಟ್ಟು ಹಬ್ಬದ ಕಾರ್ಯಕ್ರಮದಲ್ಲಿ ಬಿಜೆಪಿ ಸಂಪಾದ ಕಾರ್ಯಕ್ರಮಕ್ಕೆ ಬಂದ ಜನರಿಗೆ ಊಟ ಹಂಚಿಕೆ ಮಾಡಿ ಆರೋಪಿ 2 ನೇದವರು ಧಾರ್ಮಿಕ ಕೇಂದ್ರವನ್ನು ತಮ್ಮ ಕೇಂದ್ರದಲ್ಲಿ ಚುನಾವಣೆ ನೀತಿ ಸಂಹಿತೆ ವಿರುದ್ಧ ಕಾರ್ಯಕ್ರಮ ನಡೆಸಲು ಅವಕಾಶ ಮಾಡಿಕೊಟ್ಟು ವಿಧಾನ ಸಭಾ ಚುನಾವಣೆ ನೀತಿ ಸಂಹಿತೆ ಉಲ್ಲಂಘನೆ ಮಾಡಿದ ಅಪರಾಧ. |
| 39 | ದಕ್ಷಿಣ ಕನ್ನಡ ಜಿಲ್ಲೆ ಪುತ್ತೂರು ನಗರ ಪೊಲೀಸ್ ಠಾಣೆ ಮೊ.ಸಂ.70/2018 ಕಲಂ 143,147, 283,188, 353,332 ರ/ವಿ 149 ಐಪಿಸಿ. | ದಿನಾಂಕ 20.04.2018ರಂದು ಚುನಾವಣಾ ನೀತಿ ಸಂಹಿತೆ ಜಾರಿಯಲ್ಲಿದ್ದಾಗ ಪುತ್ತೂರು ತಾಲ್ಲೂಕು ಕಬಕ ಗ್ರಾಮದ ಮುರ ಜಂಕ್ಷನ್‌ನಲ್ಲಿ ಹಾದೂ ಹೋಗಿರುವ ಪುತ್ತೂರು-ಮಾಣಿ-ಮಂಗಳೂರು ಸಾರ್ವಜನಿಕ ರಸ್ತೆಯಲ್ಲಿ ಪ್ರಕರಣದ ಆರೋಪಿಗಳು ಕಾಶ್ಮೀರದಲ್ಲಿ ನಡೆದ ಅತ್ಯಾಚಾರವನ್ನು ಖಂಡಿಸಿ ಯಾವುದೇ ಅಧಿಕೃತ ಅನುಮತಿ ಪಡೆಯದೆ ರಸ್ತೆ ತಡೆನಡೆಸುವ ಮೂಲಕ ಸಾರ್ವಜನಿಕ ರಸ್ತೆ ಸಂಚಾರಕ್ಕೆ ಅಡ್ಡಿಪಡಿಸಿರುತ್ತಾರೆ. ಹಾಗೂ ನೀತಿ ಸಂಹಿತೆಯನ್ನು ಉಲ್ಲಂಘಿಸಿರುತ್ತಾರೆ. ಪ್ರತಿಭಟನೆಯನ್ನು ನಿಯಂತ್ರಿಸಲು ಮುಂದಾದ ಪೊಲೀಸ್ ಅಧಿಕಾರಿಗಳು/ಸಿಬ್ಬಂದಿಗಳನ್ನು ಪ್ರಕರಣದ ಆರೋಪಿಗಳು ನಿಂದಿಸಿ, ಕರ್ತವ್ಯ ನಿರ್ವಹಣೆಗೆ ಅಡ್ಡಿಪಡಿಸಿ ಸರ್ಕಾರಿ ಅಧಿಕಾರಿಗಳ ಮೇಲೆ ಹಲ್ಲೆ ಮಾಡಿರುತ್ತಾರೆ. |
| 40 | ವಿಜಯಪುರ ಜಿಲ್ಲೆ ಕೋಲ್ಹಾರ ಪೊ.ಠಾ ಮೊ.ಸಂ.81/2018 ಕಲಂ 143, 147, 109, 341, 324, 353, 427 ರ/ವಿ 149 ಐಪಿಸಿ ಮತ್ತು ಕಲಂ 3 ಕೆ.ಪಿ.ಡಿ.ಪಿ ಆಕ್ಟ್. | ದಿನಾಂಕ 20.04.2018ರಂದು ವಿಜಯಪುರ ಜಿಲ್ಲೆಯ ಕೋಲಾರ ಪೋಲಿಸ್ ಠಾಣೆಯಲ್ಲಿ ಪಿರ್ಯಾದಿ ಸುರೇಶ ಶಿವಾಜಿ ಕಾಳೆ ಪಿರ್ಯಾದಿ ಕೊಟ್ಟಿದ್ದರಲ್ಲಿ ಸುಮಾರು 50 ಜನ ಕೂಡಿಕೊಂಡು ಬಿಜೆಪಿ ಪಕ್ಷದಿಂದ ತಮ್ಮೂರ ಶ್ರೀ ಎಸ್.ಕೆ.ಬೆಳ್ಳುಬ್ಬಿ ಇವರಿಗೆ ಚುನಾವಣೆಯ ಟಿಕೇಟ್ ಕೊಟ್ಟಿರುವುದಿಲ್ಲ ಅಂತಾ ಸಂಗನಮತಮಾಡಿಕೊಂಡು ಅಕ್ರಮಕೂಟವಾಗಿ ಬಂದು ಕೈಯಲ್ಲಿ ಕಲ್ಲು ಬಡಿಗೆಗಳನ್ನು ಹಿಡಿದುಕೊಂಡು ಬಂದು ಪಿರ್ಯಾದಿ ಹಾಗೂ ಸಾಕ್ಷಿದಾರರು ಚಾಲನೆ ಮಾಡಿಕೊಂಡು ಬಂದ ಕೆ.ಎಸ್.ಆರ್.ಟಿ.ಸಿ |

| | | |
|---|---|---|
| | | ಬಸ್ಸುಗಳನ್ನು ಅಡ್ಡಗಟ್ಟಿ ನಿಲ್ಲಿಸಿ ಸರ್ಕಾರಿ ಸಾರ್ವಜನಿಕ ಆಸ್ತಿಗೆ ಲುಕ್ಸಾನ ಮಾಡುವ ಉದ್ದೇಶದಿಂದ ಬಸ್ಸುಗಳಿಗೆ ಕಲ್ಲುಗಳನ್ನು ಒಗೆದು ಲುಕ್ಸಾನಪಡಿಸಿದ್ದಲ್ಲದೇ ಸಾಕ್ಷಿದಾರ ಬಸ್ಸು ಚಾಲಕರಿಗೆ ಸರ್ಕಾರಿ ಕರ್ತವ್ಯಕ್ಕೆ ಅಡ್ಡಿಪಡಿಸಿ ಭಾರಿ ಗಾಯಪಡಿಸಿದ ಅಪರಾಧ. |
| 41. | ವಿಜಯಪುರ ಜಿಲ್ಲೆ ಕೋಲ್ಹಾರ ಪೊ.ಠಾ ಮೊ.ಸಂ.18/2019, ಕಲಂ 143, 147, 341, 504, 353 ಸಹ ಕಲಂ 149 ಐಪಿಸಿ. | ದಿನಾಂಕ 07.07.2019ರಂದು ವಿಜಯಪುರ ಜಿಲ್ಲೆಯ ಕೋಲಾರ ಪೊಲೀಸ್ ಠಾಣೆಯಲ್ಲಿ ಆರೋಪಿತರು ಶ್ರೀ ಶಿವಾನಂದ ಎಸ್.ಪಾಟೀಲ ಮಾನ್ಯ ಆರೋಗ್ಯ ಸಚಿವರು ಕರ್ನಾಟಕ ಸರ್ಕಾರ ಬೆಂಗಳೂರು ಹಾಗೂ ಶಾಸಕರು ಬಸವನ ಬಾಗೇವಾಡಿ ಇವರು ಕೋಲಾರ ಪಟ್ಟಣದ ಹಳೆ ಪ್ರವಾಸಿ ಮಂದಿರದಲ್ಲಿ ನೂತನವಾಗಿ ತಹಶೀಲ್ದಾರ ಕಾರ್ಯಾಲಯ ಭೂಮಿ ಕೇಂದ್ರದ ಉದ್ಘಾಟನೆ ಮಾಡುವ ಸಲುವಾಗಿ ಹೋದಾಗ ಸದರಿ ಪ್ರಕರಣದಲ್ಲಿಯ ನಮೂದಾದ 12 ಜನ ಆರೋಪಿತರು ಸಂಗನಮತರಾಗಿ ಅಕ್ರಮಕೂಟ ಎಸಗಿಕೊಂಡು ಮುಂದೆ ಹೋಗದಂತೆ ಸಚಿವರನ್ನು ಅಡ್ಡಗಟ್ಟಿ ಅಂಗಡಗೇರಿ ಗ್ರಾಮದ ಹದ್ದಿಯಲ್ಲಿ ಶ್ರೀ ಸಿದ್ದೇಶ್ವರ ಸಕ್ಕರೆ ಕಾರ್ಖಾನೆಯ ನಿರ್ಮಾಣದ ಸಲುವಾಗಿ ಸ್ವಾಧೀನ ಪಡಿಸಿಕೊಂಡ ರೈತರ ಜಮೀನುಗಳಿಗೆ ಪರಿಹಾರ ಧನ ನೀಡಿರುವುದಿಲ್ಲ ಅಂತಾ ತಂಟೆ ತಕರಾರು ಮಾಡಿದ ಅಪರಾಧ. |
| 42. | ಮಂಡ್ಯ ಜಿಲ್ಲೆ, ಕೆ.ಆರ್.ಪೇಟೆ ಟೌನ್ ಪೊ.ಠಾ.ಮೊ.ಸಂ. 183/2016 ಕಲಂ 143, 342, 353 ಸಹ ಕಲಂ 149 ಐಪಿಸಿ | ದಿನಾಂಕ 14.06.2016ರಂದು ಮಧ್ಯಾಹ್ನ 12-00 ಗಂಟೆಯ ಸಮಯದಲ್ಲಿ ಹಿತ ರಕ್ಷಣಾ ಸಮಿತಿ ಸದಸ್ಯರೆಂದು ಹೇಳಿ ಹೇಮಾವತಿ ಬಡಾವಣೆಯಲ್ಲಿ ಮುಸ್ಲಿಂರು ಅಕ್ರಮವಾಗಿ ಮದರಸಾ ಮತ್ತು ಪ್ರಾರ್ಥನಾ ಮಂದಿರ ನಿರ್ಮಾಣ ಮಾಡುತ್ತಿರುವುದನ್ನು ತೆರವುಗೊಳಿಸಬೇಕೆಂದು ಮನವಿ ಸಲ್ಲಿಸಲು ಬಂದಿದ್ದ ಆರೋಪಿತರುಗಳು ಯಾವುದೇ ಪೂರ್ವಾನುಮತಿ ಪಡೆಯದೆ ತಾವು ತಂದಿದ್ದ ಬೀಗವನ್ನು ತಾಲ್ಲೂಕು ಕಛೇರಿಯ ಮುಖ್ಯ ಬಾಗಿಲಿಗೆ ಬೀಗ ಹಾಕಿ ಮಿನಿ ವಿಧಾನಸೌಧದಲ್ಲಿ ಉಪಖಜಾನೆ, ಹಿಂದುಳಿದ ವರ್ಗ ಮತ್ತು ಅಲ್ಪಸಂಖ್ಯಾತರ ಇಲಾಖೆ, ರೇಷ್ಮೆ ಇಲಾಖೆಗಳಲ್ಲಿ ಕರ್ತವ್ಯ ನಿರತ ಸಿಬ್ಬಂದಿಗಳು ಕರ್ತವ್ಯ ನಿರ್ವಹಿಸದಂತೆ ಅಡ್ಡಿಪಡಿಸಿ ತೊಂದರೆಯನ್ನುಂಟು ಮಾಡಿರುತ್ತಾರೆಂದು ದೂರು. |
| 43. | ಬೆಳಗಾವಿ ಜಿಲ್ಲೆ ಚಿಕ್ಕೋಡಿ ಪೊ.ಠಾ.ಮೊ.ಸಂ. 44/2010, ಕಲಂ 143, 147, 342, 109, 186, 353 ಸಹ ಕಲಂ 149 ಐಪಿಸಿ | ಪ್ರಕರಣದ ಆರೋಪಿತರು ಗೈರು ಕಾಯ್ದೆಶಿರ ಮಂಡಳಿಯಾಗಿ ಚಿಕ್ಕೋಡಿ ಶ್ರೀ ಬಸವೇಶ್ವರ ಸರ್ಕಲ್‌ಗೆ ಬಂದು ದಿನಾಂಕ 05.02.2010ರಂದು ಬೆಳಗಾವಿಯಲ್ಲಿ ಆಯೋಜಿಸಿದ್ದ ಎಂ.ಇ.ಎಸ್ ಸೀಮಾ ಪರಿಷತ್ ಸಭೆಯ ಸಂಧರ್ಭದಲ್ಲಿ ಕ.ರ.ವೇ ಅಧ್ಯಕ್ಷರಾದ ನಾರಾಯಣಗೌಡರು ಮತ್ತು ರಾಜು ಟೋಪಣ್ಣ ಇವರುಗಳು ಪ್ರತಿಭಟನೆ ಮಾಡಿದ್ದರೀದಮ ಅವರ ಮೇಲೆ ಕ್ರಮ ಕೈಗೊಂಡ ಹಿನ್ನಲೆಯಲ್ಲಿ ಶ್ರೀ ಬಸವೇಶ್ವರ ಸರ್ಕಲ್‌ನಲ್ಲಿ ಮಾನ್ಯ ಮುಖ್ಯಮಂತ್ರಿಗಳ ಕಾರ್ಯಕ್ರಮಕ್ಕೆ ಹೊರಟ ಚುನಾಯಿತ ಪ್ರತಿನಿಧಿಗಳ ವಾಹನಗಳನ್ನು ತಡೆದು ರಸ್ತೆ ಅಡೆತಡೆ ಮಾಡಿ ಪೊಲೀಸ್ ಸಿಬ್ಬಂದಿಯನ್ನು ತಳ್ಳಾಡಿ ಕರ್ತವ್ಯಕ್ಕೆ ಅಡ್ಡಿಪಡಿಸಿದ್ದಕ್ಕಾಗಿ ಪ್ರಕರಣ ದಾಖಲಿಸಿರುವ ಬಗ್ಗೆ |
| 44. | ದಕ್ಷಿಣ ಕನ್ನಡ ಜಿಲ್ಲೆ ಪ್ರಿನ್ಸಿಪಲ್ ಮತ್ತು ಸೆಷನ್ಸ್ ನ್ಯಾಯಾಲಯ, ಮಂಗಳೂರು ಇಲ್ಲಿ ದಾಖಲಾಗಿರುವ ಖಾಸಗಿ ದೂರು ಸಂಖ್ಯೆ: ಪಿ.ಸಿ ನಂ.94/2004 (ಎಸ್.ಸಿನಂ. 255/2016) ಕಲಂ 143, 147, 148, | ಫಿರ್ಯಾದುದಾರ ಶ್ರೀ ಅಶ್ರಫ್ ಮತ್ತು ಇತರರು ಬಂಟ್ವಾಳ ನಗರ ಪೊಲೀಸ್ ಠಾಣಾ ಪ್ರಕರಣ ಸಂ. 170/2003ರಲ್ಲಿ ಆರೋಪಿತರಾಗಿದ್ದು ಈ ಪ್ರಕರಣದಲ್ಲಿ ನಿರೀಕ್ಷಣಾ ಜಾಮೀನು ಪಡೆದು ಠಾಣೆಗೆ ಸಹಿ ಮಾಡಲು ಬಂದಾಗ, ಪೊಲೀಸರು ಹೊಡೆದು ನೋವುಂಟು ಮಾಡಿರುವುದಾಗಿ ಆರೋಪಿಸಿದ ಸಂಬಂಧ ಮಾನ್ಯ ನ್ಯಾಯಾಲಯಕ್ಕೆ ಖಾಸಗಿ ಫಿರ್ಯಾದನ್ನು ಸಲ್ಲಿಸಿದ್ದು, ಮಾನ್ಯ ನ್ಯಾಯಾಲಯವು ಪಿಸಿ ನಂ. 94/2004ರಂತೆ ಪ್ರಕರಣ ದಾಖಲಿಸಿಕೊಂಡು ಸಿಸಿ 1724/2008ರಂತೆ ತನಿಖೆಯನ್ನು ಕೈಗೊಂಡು ನಂತರ |

| | | |
|---|---|---|
| | 341, 324, 325, 326, 307 ಸಹ ಕಲಂ 149 ಐಪಿಸಿ | ಪ್ರಕರಣವನ್ನು ಮಾನ್ಯ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯ, ಮಂಗಳೂರು ವರ್ಗಾವಣೆಗೊಂಡು ಎಸ್.ಸಿ.ಸಂ.255/2016ರಂತೆ ವಿಚಾರಣೆಯಲ್ಲಿರುತ್ತದೆ. |
| 45. | ಹಾಸನ ನಗರ ಪೊಲೀಸ್ ಠಾಣೆ 132/2012 ಕಲಂ 353,342, | ಶ್ರೀ ಕೋಡಿಹಳ್ಳಿ ಚಂದ್ರಶೇಖರ್ ರವರ ನೇತೃತ್ವದ ರೈತ ತಂಡವು ಹಾಸನ ಜಿಲ್ಲೆಯ ರೈತರ ಸಮಸ್ಯೆಗಳ ಬಗ್ಗೆ ಜಿಲ್ಲಾಧಿಕಾರಿಗಳಿಗೆ ಮನವಿ ನೀಡಲು ಬಂದಾಗ ಜಿಲ್ಲಾಧಿಕಾರಿಗಳು ಕಛೇರಿಯಲ್ಲಿ ಲಭ್ಯವಿಲ್ಲದಿರುವುದನ್ನು ತಿಳಿದು ಡಿ ಗ್ರೂಪ್ ನೌಕರರ ಬಳಿ ಕಛೇರಿ ಕೀ ಕಿತ್ತುಕೊಂಡು ಸಿಬ್ಬಂದಿಗಳನ್ನು ಕೂಡಿ ಹಾಕಿ ಬೀಗವನ್ನು ಹಾಕಿ ಕರ್ತವ್ಯಕ್ಕೆ ಅಡ್ಡಿ ಪಡಿಸಿರುತ್ತಾರೆ |
| 46. | ಹಾಸನ ನಗರ ಪೊಲೀಸ್ ಠಾಣೆ 267/2015 ಕಲಂ 143,147, 341,427,307 ರೆ/ವಿ 149 ಐಪಿಸಿ | ದಿನಾಂಕ.12.11.2015 ರಾತ್ರಿ ಸುಮಾರು 8-00 ಗಂಟೆಯ ಸಮಯದಲ್ಲಿ ಹಾಸನದ ಕಟ್ಟಿನಕೆರೆ ಮಾರ್ಕೆಟ್ ನಿಂದ ತನ್ನ ಆಟೋ ನಂ. ಕೆಎ 13 5784 ರಲ್ಲಿ ಬಾಡಿಗೆಗೆ ಜನರನ್ನು ಕೂರಿಸಿಕೊಂಡು ಶಾದಿಮಹಲ್ ಹತ್ತಿರ ಹೋಗಲು ನಗರದ ಶಕುನ ರಂಗನಾಥಸ್ವಾಮಿ ದೇವಸ್ಥಾನದ ಹತ್ತಿರ ಹೋಗುತ್ತಿದ್ದಾಗ ಸುಮಾರು 8 ಜನ ಅಪರಿಚಿತರ ಗುಂಪು, ಕೊಲೆ ಮಾಡುವ ಉದ್ದೇಶದಿಂದ, ಕೈಯಲ್ಲಿ ದೊಣ್ಣೆ ಹಿಡಿದು, ತನ್ನ ಆಟೋವನ್ನು ಅಡ್ಡಗಟ್ಟಿ ತಡೆದು ಆಟೋ ಮುಂಭಾಗದ ಗಾಜಿಗೆ ದೊಣ್ಣೆಯಿಂದ ಹೊಡೆದು ಜಖಂಗೊಳಿಸಿ, ತನ್ನನ್ನು ಆಟೋದಿಂದ ಕೆಳಗೆ ಎಳೆದು ತನ್ನ ತಲೆಗೆ, ಬಲ ಭುಜಕ್ಕೆ ದೊಣ್ಣೆಯಿಂದ ಹೊಡೆದು ನೋವುಂಟು ಮಾಡಿ ಎಲ್ಲರೂ ತನ್ನನ್ನು ಕೆಳಕ್ಕೆ ಕೆಡವಿಕೊಂಡು ಕಾಲಿನಿಂದ ತುಳಿದು ನೋವುಂಟು ಮಾಡಿದರು. ಅಷ್ಟರಲ್ಲಿ ನನಗೆ ಪರಿಚಯವಿರುವ ಫಾರೂಕ್ ಎಂಬುವರು ಬಂದು ಗಲಾಟೆ ಬಿಡಿಸಿ ಯಾವುದೋ ಆಟೋದಲ್ಲಿ ತನ್ನನ್ನು ಚಿಕಿತ್ಸೆಗಾಗಿ ಹಾಸನದ ಎಸ್.ಸಿ ಆಸ್ಪತ್ರೆಗೆ ಸೇರಿಸಿದರು. ನನ್ನ ಮೇಲೆ ಗಲಾಟೆ ಮಾಡಿ ಹಲ್ಲೆ ಮಾಡಿದವರ ವಿರುದ್ಧ ಕಾನೂನು ರೀತ್ಯಾ ಕ್ರಮ ಕೈಗೊಳ್ಳಬೇಕೆಂದು ಆಸ್ಪತ್ರೆಯಲ್ಲಿ ಕೊಟ್ಟ ಹೇಳಿಕೆ ಮೇರೆಗೆ ಪ್ರಕರಣ ದಾಖಲಿಸಿದೆ. |
| 47 | ಹಾಸನ ನಗರ ಪೊಲೀಸ್ ಠಾಣೆ ಮೊ.ಸಂ.269/2015,ಕಲಂ 143,147,149,153(ಎ), 436 ಐಪಿಸಿ | ದಿನಾಂಕ.13.11.2015 ರಂದು ರಾತ್ರಿ 10.30 ಗಂಟೆಗೆ ಪಿರ್ಯಾದಿ ಜಾವಿದ್ ಅಹಮದ್ ರವರು ಠಾಣೆಗೆ ಹಾಜರಾಗಿ ನೀಡಿದ ದೂರೇನೆಂದರೆ, ನನ್ನ ಮೊಬೈಲ್ ಅಂಗಡಿಯು ಹರ್ಷಮಹಲ್ ರಸ್ತೆಯ ಅಪೂರ್ವ ಹೋಟೆಲ್ ಮುಂದೆ ಇದ್ದು, ದಿನಾಂಕ.13.11.2015ರ ಸಂಜೆ 7.00 ರಿಂದ 8.00 ಗಂಟೆಯ ಒಳಗೆ ಯಾರೋ ಕಿಡಿಗೇಡಿಗಳು ಸುಟ್ಟಿರುತ್ತಾರೆ. ಇದಕ್ಕೆ ಪೆಟ್ರೋಲ್ ಬಳಸಿದ್ದು, ಆ ನನ್ನ ಅಂಗಡಿಯಲ್ಲಿದ್ದ ಸುಮಾರು ಒಂದು ಲಕ್ಷದಿಂದ ಒಂದುವರೆ ಲಕ್ಷದವರೆಗೆ ಅಂಗಡಿಯಲ್ಲಿ ಮೊಬೈಲ್ ಸಾಮಾನುಗಳಿದ್ದು ಕೆಲವು ಸಾಮಾನುಗಳು ಸುಟ್ಟು ಹೋಗಿದ್ದು, ಕಿಡಿಗೇಡಿಗಳ ಮೇಲೆ ಕ್ರಮಕೈಗೊಳ್ಳಬೇಕೆಂದು ನೀಡಿದ ದೂರಿನ ಮೇರೆಗೆ ಪ್ರಕರಣ ದಾಖಲಾಗಿರುತ್ತದೆ. |
| 48 | ಹಾಸನ ನಗರ ಪೊಲೀಸ್ ಠಾಣೆ ಮೊ.ಸಂ. 270/2015 ಕಲಂ 341, 324, 504, 307 ರೆ/ವಿ 149 ಐಪಿಸಿ | ಪಿರ್ಯಾದುದಾರರು ಟೈಲ್ಸ್ ಕೆಲಸ ಮಾಡಿಕೊಂಡು ಜೀವನ ನಡೆಸುತ್ತಿದ್ದು, ದಿನಾಂಕ 12.11.2015ರಂದು ಸಂಜೆ 7.30 ಗಂಟೆ ಸಮಯದಲ್ಲಿ ವಿದ್ಯಾನಗರದ ಒಂದು ಮನೆಯಲ್ಲಿ ಕೆಲಸ ಮುಗಿಸಿಕೊಂಡು ಗೋಕುಲ್ ಹೋಟೆಲ್ ಬಳಿ ನನ್ನ ಸ್ನೇಹಿತ ಪರ್ವೀಜ್ ಜೊತೆ ಬರುತ್ತಿದ್ದಾಗ ನನಗೆ ಪರಿಚಯವಿರುವ ಹೊಸಲೈನ್ ರಸ್ತೆಯಲ್ಲಿ ಮೆಡಿಕಲ್ ಶಾಪ್ ಇಟ್ಟುಕೊಂಡಿರುವ ಪಾರ್ಥ ಮತ್ತು ಇತರರು ನನ್ನನ್ನು ಅಡ್ಡಗಟ್ಟಿ ತಡೆದು ಅವಾಚ್ಯ ಶಬ್ದಗಳಿಂದ ಬೈಯುತ್ತಿದ್ದಾಗ, ಏಕೆ ಬೈಯುತ್ತೀರ ಎಂದು ಕೇಳಿದ್ದಕ್ಕೆ ಪಾರ್ಥ ಎಂಬುವನು ನನ್ನನ್ನೇ ಕೇಳುತ್ತೀಯ ಮಗನೇ, ನಿನ್ನನ್ನು ಕೊಲೆ ಮಾಡುತ್ತೇನೆ ಎಂದು ಅವಾಚ್ಯ ಶಬ್ದಗಳಿಂದ ಬೈಯುತ್ತಾ ಅವನ ಕೈಯಲ್ಲಿ ಹಿಡಿದಿದ್ದ ದೊಣ್ಣೆಯಿಂದ ತಲೆಗೆ ಕೊಲೆ ಮಾಡುವ ಉದ್ದೇಶದಿಂದ ಹೊಡೆದನು. ತಲೆಯಿಂದ ಜುಂಬಾ ರಕ್ತ |

| | | |
|---|---|---|
| | | ಬಂದಿದ್ದರಿಂದ ನೋವಿನಿಂದ ಕೆಳಗೆ ಬಿದ್ದಾಗ ಅವರ ಜೊತೆಯಲ್ಲಿದ್ದವರೆಲ್ಲಾ ನನ್ನನ್ನು ಕಾಲಿನಿಂದ ತುಳಿದರು ಅಷ್ಟರಲ್ಲಿ ನನ್ನ ಜೊತೆಯಲ್ಲಿದ್ದ ಪರ್ವೀಜ್ ಓಡಿ ಹೋದನು. ಈ ಸಮಯದಲ್ಲಿ ನನ್ನ ಸ್ಯಾಮಸಂಗ್ ಮೊಬೈಲ್ ಕೂಡ ಕಳೆದು ಹೋಯಿತು. ನನ್ನ ತಲೆಯಿಂದ ತುಂಬಾ ರಕ್ತ ಬರುತ್ತಿದ್ದರಿಂದ ನಾನು ಅಲ್ಲೆ ಕುಳಿತಿದ್ದಾಗ ಪರ್ವೀಜ್ ಸ್ವಲ್ಪ ಸಮಯದ ನಂತರ ವಾಪಸ್ಸು ಬಂದು ನನ್ನನ್ನು ಯಾವುದೋ ಆಟೋದಲ್ಲಿ ಚಿಕಿತ್ಸೆಗಾಗಿ ಸೇರಿಸಿದ ನಾನು ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದು ವಾಪಸ್ಸು ಮನೆಗೆ ಹೋದೆ. ಆದರೆ ತಲೆ ನೋವು ಹೆಚ್ಚಾಗಿ ರಕ್ತ ಬರುತ್ತಿದ್ದರಿಂದ ದಿನಾಂಕ.13..11.2015ರಂದು ಪುನಃ ಆಸ್ಪತ್ರೆಗೆ ಹೋಗಿ ಚಿಕಿತ್ಸೆಗೆ ದಾಖಲಾಗಿ ಚಿಕಿತ್ಸೆ ಪಡೆದು ಈ ದಿನ ತಡವಾಗಿ ದೂರು ನೀಡಿರುತ್ತೇನೆ. ನನ್ನ ಮೇಲ ಗಲಾಟೆ, ಮಾರಣಾಂತಿಕ ಹಲ್ಲೆ ಮಾಡಿದವರ ಮೇಲೆ ಕಾನೂನು ರೀತಿ ಕ್ರಮ ಕೈಗೊಳ್ಳಬೇಕೆಂದು ನೀಡಿದ ದೂರು. |
| 49. | ಹಾಸನ ಜಿಲ್ಲೆ ಬಡಾವಣೆ ಪೊಲೀಸ್ ಠಾಣೆ ಮೊ.ಸಂ. 248/2015 ಕಲಂ 143,147,148 ,153(ಎ), 427 ರ/ವಿ 149 ಐ.ಪಿ.ಸಿ | ದಿನಾಂಕ.12.11.2015ರಂದು ಫಿರ್ಯಾದಿ ಸಯ್ಯದ್ ತಬ್ರೇಜ್ ನದೀಮರವರು ತಮ್ಮ ಬಾಬ್ತು ಕೆಎ 02 ಎಂಎಂ 07777 ಸ್ಕಾರ್ಪಿಯೋ ಟರ್ಬೋ ವಾಹನವನ್ನು ತಮ್ಮ ಮನೆಯ ಮುಂದೆ ನಿಲ್ಲಿಸಿ ಮನೆಯೊಳಗೆ ಹೋಗಿ ಸುಮಾರು 7.00 ಗಂಟೆ ಸಮಯದಲ್ಲಿ ಮನೆಯಿಂದ ಹೊರಗೆ ಬಂದು ನೋಡಿದಾಗ ಸದರಿ ಮೇಲ್ಕಂಡ ವಾಹನವನ್ನು ದುಷ್ಕರ್ಮಿಗಳು ಯಾರೋ ಜಖಂಗೊಳಿಸಿ ರೂ.18000 ನಷ್ಟ ಮಾಡಿರುವ ಬಗ್ಗೆ. |
| 50. | ಹಾಸನ ಜಿಲ್ಲೆ ಪೆನ್‌ಷನ್ ಮೊಹಲ್ಲಾ ಪೊಲೀಸ್ ಠಾಣೆ 195/2015 ಕಲಂ 436 | ದಿನಾಂಕ: 13-11-15 ರಂದು ಹಾಸನ ಹುಣಸಿನಕೆರೆ ಸಳಂದ ಕಾನ್ವೆಂಟ್ ಹತ್ತಿರದ ವಾಸಿ ಇರ್ಫಾನ್, ರವರ ಬಾಬ್ತು ಹೆಚ್.ಕೆ.ಜಿ ಸ್ಟೋರ್. ದಿನಸಿ ಅಂಗಡಿಗೆ ಯಾರೋ ಬೆಂಕಿ ಹಚ್ಚಿದ್ದು, ಸುಮಾರು 22,500/- ನಗದು ಸೇರಿ ಚಿಲ್ಲರೆ ಸಾಮಾನುಗಳು ಸುಟ್ಟು ಹೋಗಿದ್ದು, ಮತ್ತು ಸುಮಾರು 6 ಲಕ್ಷ ಮೊತ್ತದ ಸಾಮಾನುಗಳು ನಷ್ಟವಾಗಿರುತ್ತದೆಂದು ಕೊಟ್ಟ ದೂರಿನ ಮೇರೆಗೆ ಪ್ರಕರಣ ದಾಖಲಿಸಿರುತ್ತದೆ. |
| 51. | ಹಾಸನ ಜಿಲ್ಲೆ ಪೆನ್‌ಷನ್ ಮೊಹಲ್ಲಾ ಪೊಲೀಸ್ ಠಾಣೆ 201/2015, 143,147,148, 427, 153(ಎ) 149 ಐಪಿಸಿ | ದಿನಾಂಕ: 12-11-2015 ರಂದು ಸಂಜೆ 6-45 ಗಂಟೆ ಸಮಯದಲ್ಲಿ ಪಿರ್ಯಾದಿಯವರು ರವರ ಬಾಬ್ತು ಅಂಗಡಿಯಲ್ಲಿ ವ್ಯಾಪಾರ ಮಾಡುತ್ತಿದ್ದಾಗ ಸುಮಾರು 20-30 ಜನರು ಕೈಯಲ್ಲಿ ಕಲ್ಲುಗಳನ್ನು ಹಿಡಿದುಕೊಂಡು ಮುಸ್ಲಿಂಗೆ ದಿಕ್ಕಾರ ಎಂದು ಘೋಷಣೆಗಳನ್ನು ಕೂಗುತ್ತಾ ಮನೆಯ ಮುಂದೆ ನಿಲ್ಲಿಸಿದ್ದ ಕೆಎ-06-ಎಂ-2702 ರ ಸ್ಯಾಂಟ್ರೋ ಕಾರು, ಕೆಎ-02-ಪಿ 2389 ರ ಮಾರುತಿ ಕಾರು ಮತ್ತು ಸಿಕೆಎಂ 8013 ರ ಮಾರುತಿ ಓಮಿನಿ ಕಾರುಗಳಿಗೆ ಕಲ್ಲು ತೂರಾಟ ನಡೆಸಿ ಕಾರುಗಳ ಗ್ಲಾಸುಗಳನ್ನು ಜಖಂಗೊಳಿಸಿರುತ್ತಾರೆಂದು ಶ್ರೀ ಮೊಹಮದ್ ಇಲಿಯಾಸ್, ರವರು ಕೊಟ್ಟ ದೂರು. |

ಇ-ಒಇ 107 ಮೊಹಿಬ 2019

18/6/2020

( ಲತಾ.ಎಸ್.ಎಸ್)
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ ( ಅಪರಾಧಗಳು)

B



ಕರ್ನಾಟಕ ಸರ್ಕಾರ

ಸಂಖ್ಯೆ: ಹೆಚ್‌ಡಿ 127 ಎಸ್‌ಎಸ್‌ಟಿ 2020

ಕರ್ನಾಟಕ ಸರ್ಕಾರ ಸಚಿವಾಲಯ
ವಿಧಾನ ಸೌಧ
ಬೆಂಗಳೂರು, ದಿನಾಂಕ:18.09.2020.

ಇವರಿಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, ಬೆಂಗಳೂರು.

ಇವರಿಗೆ,
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ/ಪರಿಷತ್ತು.
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನ ಸಭೆ/ಪರಿಷತ್ತು ಸದಸ್ಯರಾದ ಶ್ರೀ/ಶ್ರೀಮತಿ ಗೌರಿಶಂಕರ್ ಡಿ.ಸಿ ರವರ ಪ್ರಶ್ನೆ ಸಂಖ್ಯೆ 3411 ಉತ್ತರ ಒದಗಿಸುವ ಬಗ್ಗೆ.

ಉಲ್ಲೇಖ: ವಿಧಾನ ಪರಿಷತ್ತಿನ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.3411/2020, ದಿನಾಂಕ:18.03.2020.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆ/ಪರಿಷತ್ತಿನ ಸದಸ್ಯರಾದ ಶ್ರೀ/ಶ್ರೀಮತಿ ಗೌರಿಶಂಕರ್ ಡಿ.ಸಿ ರವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 3411ಕ್ಕೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ

M.R. Shobha

(ಎಂ.ಆರ್ ಶೋಭಾ)
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)
☎:22033507, e-mail: uslo-home@karnataka.gov.in

18/9/20

**ಕರ್ನಾಟಕ ವಿಧಾನಸಭೆ**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3411 |
| ಸದಸ್ಯರ ಹೆಸರು | : | ಶ್ರೀ ಗೌರಿಶಂಕರ್.ಡಿ.ಸಿ(ತುಮಕೂರು ಗ್ರಾಮಾಂತರ) |
| ಉತ್ತರಿಸುವ ದಿನಾಂಕ | : | 31-03-2020 |
| ಉತ್ತರಿಸುವ ಸಚಿವರು | : | ಗೃಹ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ತುಮಕೂರು ಗ್ರಾಮಾಂತರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕಾನೂನು ಬಾಹಿರ ಚಟುವಟಿಕೆಗಳಾದ ಇಸ್ಪೀಟ್ ದಂಧೆ, ಅಕ್ರಮ ಮರಳು ಸಾಗಾಣಿಕೆ, ಅಕ್ರಮ ಗಣಿಗಾರಿಕೆ ಇನ್ನಿತರ ಅನೈತಿಕ ಚಟುವಟಿಕೆಗಳನ್ನು ಮಾಡುತ್ತಿರುವುದರಿಂದ ತುಮಕೂರು ಗ್ರಾಮಾಂತರ ವೃತ್ತ ನಿರೀಕ್ಷಕರು ಹಾಗೂ ಪೊಲೀಸ್ ಅಧಿಕಾರಿಗಳು ಹಫ್ತಾ ವಸೂಲಿ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಈ ಬಗ್ಗೆ ಕೈಗೊಂಡ ಕ್ರಮಗಳೇನು; | ತುಮಕೂರು ಗ್ರಾಮಾಂತರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಕಾನೂನು ಬಾಹಿರ ಚಟುವಟಿಕೆಗಳಾದ ಇಸ್ಪೀಟ್ ದಂಧೆ, ಅಕ್ರಮ ಮರಳು ಸಾಗಾಣಿಕೆ, ಅಕ್ರಮ ಗಣಿಗಾರಿಕೆ ಇನ್ನಿತರ ಕಾನೂನು ಬಾಹಿರ ಚಟುವಟಿಕೆಗಳನ್ನು ತಡೆಗಟ್ಟಲು 2019 ಮತ್ತು 2020ನೇ ಸಾಲಿನಲ್ಲಿ ದಾಳಿ ನಡೆಸಿ ಪ್ರಕರಣಗಳನ್ನು ದಾಖಲಿಸಲಾಗಿರುತ್ತದೆ. ವಿವರಗಳನ್ನು ಅನುಬಂಧ-ಅ ರಲ್ಲಿ ಒದಗಿಸಲಾಗಿದೆ.<br><br>ತುಮಕೂರು ಗ್ರಾಮಾಂತರ ವೃತ್ತ ನಿರೀಕ್ಷಕರು ಹಾಗೂ ಪೊಲೀಸ್ ಅಧಿಕಾರಿಗಳು ಹಫ್ತಾ ವಸೂಲಿ ಮಾಡುವಂತಹ ಯಾವುದೇ ಚಟುವಟಿಕೆಗಳು ಕಂಡುಬಂದಿರುವುದಿಲ್ಲ. ಅಂತಹ ಚಟುವಟಿಕೆಗಳು ಕಂಡುಬಂದಲ್ಲಿ ನಿಯಮಾನುಸಾರ ಅಗತ್ಯ ಕ್ರಮ ಕೈಗೊಳ್ಳಲಾಗುವುದು. |
| ಆ) | ಈ ಕ್ಷೇತ್ರ ವ್ಯಾಪ್ತಿಯಲ್ಲಿ ಒಂಟಿ ಮಹಿಳೆ ಕೊಲೆಗಳು ಹೆಚ್ಚಿದ್ದು, ಕೊಲೆಗಾರರನ್ನು ಹಿಡಿಯುವಲ್ಲಿ ಪೊಲೀಸ್ ಅಧಿಕಾರಿಗಳು ಸಂಪೂರ್ಣ ವಿಫಲರಾಗಿದ್ದು ಹಾಗೂ ಸಾರ್ವಜನಿಕರು ಭಯದ ವಾತಾವರಣದಲ್ಲಿ ಬದುಕುತ್ತಿದ್ದು ಹಾಗೂ ಕಾನೂನು ಸುವ್ಯವಸ್ಥೆ ಹದಗೆಟ್ಟಿದ್ದು, ಪೊಲೀಸ್ ಅಧಿಕಾರಿಗಳು ಸಂಪೂರ್ಣ ವಿಫಲರಾಗಿರುವುದರಿಂದ ಕಾನೂನು ಸುವ್ಯವಸ್ಥೆ ಕಾಪಾಡಲು ಸರ್ಕಾರದ ಕ್ರಮಗಳೇನು? | ತುಮಕೂರು ಗ್ರಾಮಾಂತರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ 2019ನೇ ಸಾಲಿನಲ್ಲಿ 03 ಒಂಟಿ ಮಹಿಳೆಯರ ಕೊಲೆ ಪ್ರಕರಣಗಳು ವರದಿಯಾಗಿದ್ದು, ಈ ಪೈಕಿ 02 ಪ್ರಕರಣಗಳಲ್ಲಿ ಎಲ್ಲಿಯೋ ಕೊಲೆ ಮಾಡಿ ಮೃತದೇಹಗಳನ್ನು ತಂದು ಹಾಕಿರುವ ಪ್ರಕರಣಗಳಾಗಿರುತ್ತವೆ. 01 ಪ್ರಕರಣ ಮಾತ್ರ ಕ್ಯಾತಸಂದ್ರ ಪೊಲೀಸ್ ಠಾಣಾ ವ್ಯಾಪ್ತಿಯ ದೊಡ್ಡ ತಿಮ್ಮಯ್ಯನ ಪಾಳ್ಯದ ಬಳಿ ನಡೆದಿರುತ್ತದೆ. ವಿವರ ಈ ಕೆಳಕಂಡಂತೆ ಇರುತ್ತದೆ:-<br><br>1. **ಹೆಬ್ಬೂರು ಪೊಲೀಸ್ ಠಾಣಾ ಮೊ.ಸಂ.119/2019 ಕಲಂ 301, 201 ಐ.ಪಿ.ಸಿ:** ಕ್ಯಾತಸಂದ್ರ ವೃತ್ತದ ಹೆಬ್ಬೂರು ಪೊಲೀಸ್ ಠಾಣಾ ವ್ಯಾಪ್ತಿಯ ಮಾಕನಹಳ್ಳಿ ಬಳಿ ಹೇಮಾವತಿ ಚಾನೆಲ್ ಬಳಿ ಒಬ್ಬ ಹೆಂಗಸನ್ನು ಯಾರೋ ದುಷ್ಕರ್ಮಿಗಳು ಎಲ್ಲಿಯೋ ಕೊಲೆ ಮಾಡಿ ಆಕೆಯನ್ನು ಗೋಣಿಚೀಲದಲ್ಲಿ ತುಂಬಿ ತಂದು ಹಾಕಿದ್ದು, ಶವವು ಅರ್ಧಂಬರ್ಧ ಕೊಳೆತ ಸ್ಥಿತಿಯಲ್ಲಿದ್ದು, ಗುರುತು ಸಿಗದ ಹಾಗೆ ಆಗಿರುತ್ತದೆ. ಈ ಬಗ್ಗೆ ಹೆಬ್ಬೂರು ಪೊಲೀಸ್ ಠಾಣೆಯಲ್ಲಿ ಪ್ರಕರಣ ದಾಖಲಾಗಿರುತ್ತದೆ.<br>2. **ಕ್ಯಾತಸಂದ್ರ ಪೊಲೀಸ್ ಠಾಣಾ ಮೊ.ಸಂ.208/2019 ಕಲಂ 302 ಐ.ಪಿ.ಸಿ:** ಕ್ಯಾತಸಂದ್ರ ವೃತ್ತದ ಕ್ಯಾತಸಂದ್ರ ಪೊಲೀಸ್ ಠಾಣಾ ವ್ಯಾಪ್ತಿಯ ದೊಡ್ಡ ತಿಮ್ಮಯ್ಯನ ಪಾಳ್ಯದ ಬಳಿ ಭಾಗ್ಯಮ್ಮ ಎಂಬ 35 ವರ್ಷದ ಮಹಿಳೆಯನ್ನು ಯಾರೋ ದುಷ್ಕರ್ಮಿಗಳು ಯಾವುದೋ ಆಯುಧದಿಂದ ಕುತ್ತಿಗೆಗೆ ತಿವಿದು ಕೊಲೆ ಮಾಡಿರುವ ಬಗ್ಗೆ ಪ್ರಕರಣ ದಾಖಲಾಗಿರುತ್ತದೆ. |

| | | |
|---|---|---|
| | | 3. <u>ಕೋರ ಪೊಲೀಸ್ ಠಾಣಾ ಮೊ.ಸಂ.159/2019 ಕಲಂ 302, 201 ಐ.ಪಿ.ಸಿ:</u> ತುಮಕೂರು ಗ್ರಾಮಾಂತರ ವೃತ್ತದ ಕೋರಾ ಪೊಲೀಸ್ ಠಾಣಾ ವ್ಯಾಪ್ತಿಯ ನೆಲಹಾಲ್ ಸರ್ಕಲ್ ಬಳಿ ಒಬ್ಬ ಹೆಂಗಸನ್ನು ಯಾರೋ ದುಷ್ಕರ್ಮಿಗಳು ಎಲ್ಲಿಯೋ ಕೊಲೆ ಮಾಡಿ ತಂದು ಹಾಕಿ, ಗುರುತು ಸಿಗದ ಹಾಗೆ ಯಾವುದೋ ಇಂಧನವನ್ನು ಹಾಕಿ ಸುಟ್ಟು ಹಾಕಿರುವ ಬಗ್ಗೆ ಪ್ರಕರಣ ದಾಖಲಾಗಿರುತ್ತದೆ.<br><br>ಮೇಲ್ಕಂಡ ಪ್ರಕರಣಗಳ ಪತ್ತೆಗೆ ಕೃತ್ಯ ನಡೆದ ಸ್ಥಳಕ್ಕೆ ಹೊಂದಿಕೊಂಡಂತೆ ಟವರ್ ಡಂಪ್ ಹಾಕಿಸಿ ತಾಂತ್ರಿಕವಾಗಿ ತನಿಖೆ ನಡೆಸಿ ಪತ್ತೆಗೆ ಪ್ರಯತ್ನಿಸಿದ್ದು, ಸಂಶಯಾಸ್ಪದ ವ್ಯಕ್ತಿಗಳನ್ನು ಸಹ ವಿಚಾರಣೆಗೆ ಒಳಪಡಿಸಲಾಗಿರುತ್ತದೆ. ಸಿ.ಪಿ.ಐ.ಕ್ಯಾತ್ಸಂದ್ರ & ತುಮಕೂರು ಗ್ರಾಮಾಂತರ ವೃತ್ತರವರುಗಳು ಪ್ರಾಮಾಣಿಕವಾಗಿ ಪ್ರಕರಣಗಳನ್ನು ಪತ್ತೆ ಮಾಡಲು ಕ್ರಮವಹಿಸಿರುತ್ತಾರೆ. |
| ಇ) | ತುಮಕೂರು ಗ್ರಾಮಾಂತರ ವೃತ್ತ ನಿರೀಕ್ಷಕರು ಕಾನೂನು ಸುವ್ಯವಸ್ಥೆ ಕಾಪಾಡಲು ಹಾಗೂ ಕಾನೂನು ಬಾಹಿರ ಚಟುವಟಿಕೆಗಳನ್ನು ನಿಯಂತ್ರಿಸಲು ಮಾನ್ಯ ಶಾಸಕರ ಮಾರ್ಗದರ್ಶನ ಪಡೆದಿದ್ದಾರೆಯೇ; ಪಡೆದಿಲ್ಲವಾದಲ್ಲಿ, ಕಾರಣವೇನು; | ಪ್ರಸ್ತುತ ತುಮಕೂರು ಗ್ರಾಮಾಂತರ ಕ್ಷೇತ್ರದ ವ್ಯಾಪ್ತಿಯಲ್ಲಿ ಕಾನೂನು ಸುವ್ಯವಸ್ಥೆ ಶಾಂತ ರೀತಿಯಲ್ಲಿದ್ದು, ಭಂಗ ತರುವಂತಹ ಯಾವುದೇ ಘಟನೆಗಳು ನಡೆದಿರುವುದಿಲ್ಲ. ಕಾನೂನು ಸುವ್ಯವಸ್ಥೆಗೆ ಸಂಬಂಧಪಟ್ಟಂತೆ ಮಾನ್ಯ ಶಾಸಕರ ಸಲಹೆ ಸೂಚನೆಗಳ ಅಗತ್ಯತೆ ಕಂಡು ಬಂದಲ್ಲಿ ಅವರ ನೆರವನ್ನು ಪಡೆದುಕೊಳ್ಳುವಂತೆ ತುಮಕೂರು ಗ್ರಾಮಾಂತರ ವೃತ್ತ ನಿರೀಕ್ಷಕರಿಗೆ ಸೂಕ್ತ ತಿಳುವಳಿಕೆಯನ್ನು ನೀಡಲಾಗಿದೆ. |
| ಈ) | ಸದರಿ ವೃತ್ತ ನಿರೀಕ್ಷಕರು ಹಾಗೂ ಸಬ್‌ಇನ್ಸ್‌ಪೆಕ್ಟರ್‌ಗಳು ಶಿಷ್ಟಾಚಾರ ಉಲ್ಲಂಘಿಸುತ್ತಿರುವ ಬಗ್ಗೆ ಯಾವುದಾದರೂ ದೂರುಗಳು ಸರ್ಕಾರಕ್ಕೆ ಸಲ್ಲಿಕೆಯಾಗಿವೆಯೇ? ಸಲ್ಲಿಕೆಯಾಗಿದ್ದಲ್ಲಿ, ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಈ ಸಂಬಂಧ ಯಾವುದೇ ದೂರುಗಳು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. |

ಹೆಚ್‌ಡಿ 12[illegible] ಎಸ್‌ಎಸ್‌ಟಿ 2020

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು.

## ಅನುಬಂಧ – ಅ

| ಕ್ರಸ. | ವಿವರ | 2019 | | | 2020 | | |
|---|---|---|---|---|---|---|---|
| | | ದಾಖಲಿಸಿದ ಪ್ರಕರಣಗಳು | ದಸ್ತಗಿರಿ ಮಾಡಿದ ಆರೋಪಿಗಳು | ಅಮಾನತ್ತು ಪಡಿಸಿದ ಮೊತ್ತ | ದಾಖಲಿಸಿದ ಪ್ರಕರಣಗಳು | ದಸ್ತಗಿರಿ ಮಾಡಿದ ಆರೋಪಿಗಳು | ಅಮಾನತ್ತು ಪಡಿಸಿದ ಮೊತ್ತ |
| 1 | ಅಕ್ರಮ ಜೂಜಾಟ | 40 | 228 | 433042 | 9 | 24 | 49887 |
| 2 | ಅಕ್ರಮ ಮರಳು ಸಾಗಾಣೆ | 16 | 22 | 0 | 1 | 0 | 0 |
| 3 | ಅಕ್ರಮ ಗಣಿಗಾರಿಕೆ | 1 | 1 | 0 | 0 | 0 | 0 |
| 4 | ವೇಶ್ಯಾವಾಟಿಕೆ ದಂಧೆ | 2 | 5 | 500 | 0 | 0 | 0 |
| 5 | ಅಕ್ರಮ ಮದ್ಯ ಮಾರಾಟ | 31 | 31 | 1230 | 9 | 9 | 12240 |
| 6 | ಇ.ಸಿ. ಆಕ್ಟ್ | 2 | 4 | 0 | 0 | 0 | 0 |
| | **ಒಟ್ಟು** | **92** | **291** | **434772** | **19** | **33** | **62127** |

6 ನೆ



**ಕರ್ನಾಟಕ ಸರ್ಕಾರ**

**L.A.Q**

ಸಂಖ್ಯೆ: ಸಿಆಸುಇ 33 ಎಸ್‌ಎಸ್‌ಸಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಕೊಠಡಿ ಸಂಖ್ಯೆ: 363ಇ, ವಿಧಾನಸೌಧ,
ಬೆಂಗಳೂರು, ದಿನಾಂಕ: 15.03.2021

**ಇವರಿಂದ:**
ಸರ್ಕಾರದ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
ವಿಧಾನಸೌಧ,
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ವಿಧಾನಸಭೆಯ ಮಾನ್ಯ ಸದಸ್ಯರಾದ ಶ್ರೀ ಯು.ಟಿ.ಖಾದರ್(ಮಂಗಳೂರು), ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3404ಗೆ ಉತ್ತರ ಒದಗಿಸುವ ಬಗ್ಗೆ.
**ಉಲ್ಲೇಖ:** ಅ.ಸಪತ್ರ ಸಂಖ್ಯೆ: ವಿಸಪ್ರಶಾ/15ನೇವಿಸ/6ಅ/ಚುಗು-ಚುರ.ಪ್ರಶ್ನೆ/18/2020 ದಿನಾಂಕ:18.03.2020.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಯು.ಟಿ.ಖಾದರ್(ಮಂಗಳೂರು), ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:3404ಕ್ಕೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಹೆಚ್.ಕೆ.ಶಾಂತರಾಜು)
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಸೇವೆಗಳು-7).

15/03

Scan on 1/4/2021

16/3/21

340(a)

# ಕರ್ನಾಟಕ ವಿಧಾನಸಭೆ

1.ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3404
2. ಸದಸ್ಯರ ಹೆಸರು : ಶ್ರೀ ಖಾದರ್ ಯು.ಟಿ
3.ಉತ್ತರಿಸುವ ದಿನಾಂಕ : 31-03-2020
ಉತ್ತರಿಸುವ ಸಚಿವರು : ಮುಖ್ಯಮಂತ್ರಿ

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ಕರ್ನಾಟಕ ಲೋಕಸೇವಾ ಆಯೋಗವು 2015ನೇ ಸಾಲಿನ ಗೆಜಿಟೆಡ್ ಪ್ರೊಬೇಷನರಿ ಹುದ್ದೆಗಳಿಗೆ ಕರ್ನಾಟಕ ಸಿವಿಲ್ ಸರ್ವಿಸಸ್ ಕಾಯ್ದೆ 2018ರ ಪ್ರಕಾರ ಆಯ್ಕೆ ಮಾಡಲಾಗಿದೆಯೇ: | ಹೌದು |
| ಆ | ಆಯ್ಕೆಪಟ್ಟಿಯನ್ನು ಕಾಯ್ದೆಯ ಪ್ರಕಾರ ತಯಾರಿಸಿದ್ದಲ್ಲಿ ಮೊದಲ,ದ್ವಿತೀಯ,ತೃತೀಯ ಮತ್ತು ಮುಖ್ಯಪಟ್ಟಿ ಹಾಗೂ ಅಂತಿಮ ಆಯ್ಕೆಪಟ್ಟಿಯ ಪ್ರತಿಗಳನ್ನು ಒದಗಿಸುವುದು: | ಸದರಿ ಕಾಯ್ದೆಯ ಪ್ರಕಾರ ಮೊದಲನೇ ಪಟ್ಟಿಯು ಮೆರಿಟ್ ಅನುಸಾರವಾದ್ದರಿಂ ಇದನ್ನು 'ಜೇಷ್ಠತಾ ಪಟ್ಟಿ' ಎಂದು ಕರೆಯಲಾಗುವುದು. ಸದರಿ ಜೇಷ್ಠತಾ ಪ ಆಧಾರದ ಮೇರೆಗೆ ಎರಡನೇ ಪಟ್ಟಿ ಹಾಗೂ ಮೂರನೇ ಪಟ್ಟಿ ಒಳಗೊಂಡ ಅಂತಿಮ ಆಯ್ಕೆಪಟ್ಟಿಯನ್ನು ತಯಾರಿಸಲಾಗುವುದು.<br><br>ಮುಂದುವರೆದು 'Karnataka Recruitment of Gazetted Probatione (Appointment by Competative Examination)Rules, 1997 Rule 11(2)-The l prepared shall be published by the Commission in the official Gaze' ಎಂದಿದ್ದು, ಅದರಂತೆ ಆಯೋಗವು ಕಾಯ್ದೆಯಲ್ಲಿ ತಿಳಿಸಲಾದ ಎರಡನೇ ಪ ಹಾಗೂ ಮೂರನೇ ಪಟ್ಟಿ ಒಳಗೊಂಡ ಅಂತಿಮ ಆಯ್ಕೆಪಟ್ಟಿಯನ್ನು ಮಾ ಪ್ರಕಟಿಸಲಾಗುವುದು.<br><br>2015ನೇ ಸಾಲಿನ ಗೆಜಿಟೆಡ್ ಪ್ರೊಬೇಷನರ್ ಹುದ್ದೆಗಳ ಅಂತಿಮ ಆಯ್ಕೆಪಟ್ಟಿ ಪ್ರತಿಯನ್ನು ಇದರೊಂದಿಗೆ ಲಗತ್ತಿಸದೆ. |
| ಇ | ಈ ಎಲ್ಲಾ ಪಟ್ಟಿಗಳನ್ನು ಅಭ್ಯರ್ಥಿಗಳ ಗಮನಕ್ಕೆ ಆಯೋಗದ ವೆಬ್‌ಸೈಟ್ ನಲ್ಲಿ ಪ್ರಕಟಿಸಲಾಗುವುದೇ: | ಮೊದಲನೇ ಪಟ್ಟಿಯಾದ ಜೇಷ್ಠತಾ ಪಟ್ಟಿಯನ್ನು ಬಹಿರಂಗಪಡಿಸುವುದಿ ಎರಡನೇ ಪಟ್ಟಿ ಹಾಗೂ ಮೂರನೇ ಪಟ್ಟಿಯನ್ನು ಒಳಗೊಂಡ ಅಂತಿ ಆಯ್ಕೆಪಟ್ಟಿಯ ಅಧಿಸೂಚನೆಯನ್ನು ಆಯೋಗದ ವೆಬ್ ಸೈಟ್ ನ ಪ್ರಕಟಿಸಲಾಗಿರುತ್ತದೆ. |
| ಈ | ಸದರಿ ಪಟ್ಟಿಗಳನ್ನು ಅಭ್ಯರ್ಥಿಗಳಿಗೆ ಮಾಹಿತಿ ಹಕ್ಕಿನಡಿ ಅರ್ಜಿ ಸಲ್ಲಿಸಿದ್ದಲ್ಲಿ ನೀಡಲಾಗುವುದೇ; ನೀಡಲಾಗದಿದ್ದರೆ ಕಾರಣವೇನು; | ಮೊದಲನೇ ಪಟ್ಟಿಯಾದ ಜೇಷ್ಠತಾ ಪಟ್ಟಿಯನ್ನು ಆಯಾ ಹುದ್ದೆಗ ಆಯ್ಕೆಯಾದ ಹಾಗೂ ಆಯ್ಕೆಯಾಗದ ಎಲ್ಲಾ ಅಭ್ಯರ್ಥಿಗಳ ಮಾಹಿತಿಯು ಅವ ಕೋರಿದ ಮೀಸಲಾತಿ ವಿವರಗಳೊಂದಿಗೆ ಅವರು ಅರ್ಹತಾ ಪರೀಕ್ಷೆಯಲ್ಲಿ ಪಡ ಅಂಕಗಳ/ಶೇಕಡಾವಾರು ಅಂಕಗಳ ಜೇಷ್ಠತೆಯಲ್ಲಿ ನಮೂದಿಸಲಾಗಿರುತ್ ಇದನ್ನು ಬಹಿರಂಗಪಡಿಸುವುದರಿಂದ 3ನೇ ಪಕ್ಷಕಾರನ ಸ್ಪರ್ಧಾತ್ಮಕತೆಗೆ ತೊಂದ ಉಂಟಾಗುವುದರಿಂದ ಸದರಿ ಮಾಹಿತಿಯನ್ನು ಮಾಹಿತಿ ಹಕ್ಕು ಅಧಿನಿಯಮ 2005ರ ನಿಯಮ 8(ಡಿ)ರನ್ವಯ ಬಹಿರಂಗಪಡಿಸಲು ಅವಕಾಶವಿರುವುದಿಲ್ಲ.<br><br>ಎರಡನೇ ಪಟ್ಟಿ ಹಾಗೂ ಮೂರನೇ ಪಟ್ಟಿ ಒಳಗೊಂಡು ಅಂತಿಮ ಆಯ್ಕೆಪಟ್ಟಿ ಅಧಿಸೂಚನೆಯನ್ನು ಆಯೋಗದ ವೆಬ್ ಸೈಟ್ ನಲ್ಲಿ ಪ್ರಕಟಿಸಲಾಗಿರುತ್ತದೆ. ಅಂತಿಮ ಆಯ್ಕೆಪಟ್ಟಿಯನ್ನು ಕೋರಿ ಮಾಹಿತಿ ಹಕ್ಕು ಅಧಿನಿಯಮದ ಅಭ್ಯರ್ಥಿಗಳು ಅರ್ಜಿ ಸ;ಲ್ಲಿಸಿದ್ದಲ್ಲಿ ಆಯೋಗದ ವೆಬ್ ಸೈಟ್ ನಲ್ಲಿ ಲಭ್ಯವಿರು ಅವಧಿಯಲಿ ಡೌನ್ ಲೋಡ್ ಲಭ್ಯವಿಲ್ಲದ ಅವಧಿಗೆ ಸದರಿ ಪ್ರತಿಯನ್ನು ಮಾಹಿ ಹಕ್ಕು ಮನವಿದಾರರಿಗೆ ಒದಗಿಸಲಾಗುತ್ತದೆ. |

ಸಂಖ್ಯೆ: ಸಿಆಸುಇ 37 ಎಸ್ಎಸ್‌ಸಿ 2020

**(ಬಿ.ಎಸ್.ಯಡಿಯೂರಪ್ಪ)**
ಮುಖ್ಯಮಂತ್ರಿ

<u>ಅನುಬಂಧ - 1</u>

# ಕ್ರೀಡಾ ಇಲಾಖೆಯಿಂದ ವಾರ್ಷಿಕವಾಗಿ ನಡೆಯುತ್ತಿರುವ ಕ್ರೀಡಾ ಚಟುವಟಿಕೆಗಳ ವಿವರ

| ಕ್ರ. ಸಂ. | ಕಾರ್ಯಕ್ರಮಗಳ ವಿವರ | ಭೌತಿಕ ಪ್ರಗತಿ 2019-20 | ಆರ್ಥಿಕ ಪ್ರಗತಿ 2019-20 (ರೂ.ಲಕ್ಷಗಳಲ್ಲಿ) |
|---|---|---|---|
| 1 | 2019-20ನೇ ಸಾಲಿನಲ್ಲಿ 06 ತಾಲ್ಲೂಕುಗಳಲ್ಲಿ ತಾಲ್ಲೂಕು ಮಟ್ಟದ ದಸರಾ ಕ್ರೀಡಾಕೂಟ ಸಂಘಟಿಸಲು ಪ್ರತಿ ತಾಲ್ಲೂಕಿಗೆ ರೂ.60,000/- ಗಳಂತೆ ಒಟ್ಟು ರೂ.3.60 ಲಕ್ಷಗಳು ವೆಚ್ಚವಾಗಿರುತ್ತದೆ. ವಿಜೇತರಾಗಿರುವ ಕ್ರೀಡಾಪಟುಗಳಿಗೆ ಪ್ರಶಸ್ತಿ ಪತ್ರ, ಬಹುಮಾನ, ಊಟದ ವ್ಯವಸ್ಥೆ ಹಾಗೂ ಆಹ್ವಾನ ಪತ್ರಿಕೆ, ಕರಪತ್ರಗಳು, ಶಾಮಿಯಾನ, ಧ್ವನಿವರ್ಧಕ, ಕುರ್ಚಿಗಳು, ಕುಡಿಯುವ ನೀರು, ಮಾರ್ಕಿಂಗ್ ಪೌಡರ್ ವೆಚ್ಚ ಮತ್ತು ತೀರ್ಪುಗಾರರಿಗೆ ಗೌರವಧನಕ್ಕೆ ವೆಚ್ಚ ಭರಿಸಿದೆ. | 06 | 3.60 |
| 2 | ಜಿಲ್ಲಾ ಮಟ್ಟದ ದಸರಾ ಕ್ರೀಡಾಕೂಟವನ್ನು ಜಿಲ್ಲಾ ಕ್ರೀಡಾಂಗಣದಲ್ಲಿ ಸಂಘಟಿಸಲಾಗಿದ್ದು, ಈಗಾಗಲೇ 6 ತಾಲ್ಲೂಕುಗಳಲ್ಲಿ ನಡೆದ ತಾಲ್ಲೂಕು ಮಟ್ಟದ ದಸರಾ ಕ್ರೀಡಾಕೂಟಗಳಲ್ಲಿ ವೈಯಕ್ತಿಕ ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ ಮತ್ತು ದ್ವಿತೀಯ ಸ್ಥಾನ ಪಡೆದ ಹಾಗೂ ಗುಂಪು ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ ಪಡೆದ ಕ್ರೀಡಾಪಟುಗಳು ಈ ಕ್ರೀಡಾಕೂಟದಲ್ಲಿ ಭಾಗವಹಿಸಿರುತ್ತಾರೆ. ಭಾಗವಹಿಸಿದ ಕ್ರೀಡಾಪಟುಗಳಿಗೆ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ನೀಡಲಾಗಿದೆ. ವಿಜೇತ ಕ್ರೀಡಾಪಟುಗಳಿಗೆ ಪ್ರಶಸ್ತಿ ಪತ್ರ, ಬಹುಮಾನ ನೀಡಲಾಗಿದೆ. ತೀರ್ಪುಗಾರರಿಗೆ ಗೌರವಧನ ಹಾಗೂ ಸಂಘಟನಾ ವೆಚ್ಚ ಭರಿಸಿದೆ | 01 | 4.00 |
| 3 | ಬೆಂಗಳೂರು ವಿಭಾಗ ಮಟ್ಟದ ದಸರಾ ಕ್ರೀಡಾ ಕ್ರೀಡಾಕೂಟವು ಕೆಳಕಂಡ ಜಿಲ್ಲೆಗಳಲ್ಲಿ ಸಂಘಟಿಸಲಾಗಿದೆ.<br>1. ಶಿವಮೊಗ್ಗ 2) ಚಿತ್ರದುರ್ಗ 3) ದಾವಣಗೆರೆ 4) ತುಮಕೂರು 5) ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಲ್ಲಿ ನಡೆದ ಬೆಂಗಳೂರು ವಿಭಾಗ ಮಟ್ಟದ ದಸರಾ ಕ್ರೀಡಾಕೂಟದಲ್ಲಿ ಜಿಲ್ಲೆಯಿಂದ ಭಾಗವಹಿಸಿದ ಮಹಿಳಾ ಮತ್ತು ಪುರುಷ ಕ್ರೀಡಾಪಟುಗಳಿಗೆ ಪ್ರಯಾಣ ಭತ್ಯೆ ಮತ್ತು ದಿನಭತ್ಯೆ ನೀಡಲಾಗಿದೆ. ಹಾಗೂ ಕ್ರೀಡಾ ಸಮವಸ್ತ್ರವನ್ನು ಇ-ಪ್ರಕ್ಯೂರ್ ಮೆಂಟ್ ಮೂಲಕ ಟೆಂಡರ್ ಆಹ್ವಾನಿಸಿ ಖರೀದಿಸಿ ವಿತರಿಸಿದೆ. | 05 | 4.20 |
| 4 | ಮೈಸೂರಿನ ಚಾಮುಂಡಿ ವಿಹಾರ ಕ್ರೀಡಾಂಗಣದಲ್ಲಿ ನಡೆದ ರಾಜ್ಯ ಮಟ್ಟದ ದಸರಾ ಕ್ರೀಡಾಕೂಟದಲ್ಲಿ ಜಿಲ್ಲೆಯಿಂದ ಭಾಗವಹಿಸಿದ ಕ್ರೀಡಾಪಟುಗಳಿಗೆ ಪ್ರಯಾಣ ಭತ್ಯೆ ನೀಡಲಾಗಿದೆ. | 01 | 0.19 |
| 5 | ರಾಜ್ಯ ಸರ್ಕಾರಿ ನೌಕರರ ಕ್ರೀಡಾಕೂಟವನ್ನು ಜಿಲ್ಲಾ ಕ್ರೀಡಾಂಗಣದಲ್ಲಿ ಸಂಘಟಿಸಲಾಗಿದೆ. | 01 | 0.50 |

## ಅನುಬಂಧ-2

## ಕರ್ನಾಟಕ ಕ್ರೀಡಾ ಪ್ರಾಧಿಕಾರದಲ್ಲಿ ಕಾರ್ಯನಿರ್ವಹಿಸುತ್ತಿರುವ ಕ್ರೀಡಾವಾರು ತರಬೇತುದಾರರ ವಿವರ

| ಕ್ರಮ ಸಂಖ್ಯೆ | ಕ್ರೀಡೆ | ತರಬೇತುದಾರರ ಸಂಖ್ಯೆ |
|---|---|---|
| 1 | ಅಥ್ಲೆಟಿಕ್ಸ್ | 11 |
| 2 | ಬ್ಯಾಡ್ಮಿಂಟನ್ | 1 |
| 3 | ಬಾಸ್ಕೆಟ್‌ಬಾಲ್ | 7 |
| 4 | ಕ್ರಿಕೆಟ್ | 2 |
| 5 | ಸೈಕ್ಲಿಂಗ್ | 5 |
| 6 | ಫೆನ್ಸಿಂಗ್ | 1 |
| 7 | ಫುಟ್‌ಬಾಲ್ | 3 |
| 8 | ಜಿಮ್ನಾಸ್ಟಿಕ್ಸ್ | 6 |
| 9 | ಹಾಕಿ | 12 |
| 10 | ಜೂಡೋ | 2 |
| 11 | ಕಬಡ್ಡಿ | 3 |
| 12 | ಖೋ-ಖೋ | 5 |
| 13 | ಲಾನ್ ಟೆನ್ನಿಸ್ | 1 |
| 14 | ಈಜು | 1 |
| 15 | ವಾಲಿಬಾಲ್ | 14 |
| 16 | ವೇಯ್ಟ್‌ಲಿಫ್ಟಿಂಗ್ | 2 |
| 17 | ಕುಸ್ತಿ | 2 |
|  | ಒಟ್ಟು | 78 |

## ಅನುಬಂಧ - 3

## 2019-20 ನೇ ಸಾಲಿನಲ್ಲಿ ಕ್ರೀಡಾ ಇಲಾಖೆಯಲ್ಲಿ ಮಾರ್ಚ್ 2020 ರವರೆಗೆ ಕಾರ್ಯಕ್ರಮಗಳಿಗಾಗಿ ಭರಿಸಿರುವ ವೆಚ್ಚದ ವಿವರ ಹಾಗೂ ಆಗಿರುವ ಅಭಿವೃದ್ಧಿ ಕಾಮಗಾರಿಗಳು ಹಾಗೂ ಇನ್ನಿತರ ಯೋಜನೆಯಡಿ ಸಾಧಿಸಿರುವ ಯೋಜನಾವಾರು ಭೌತಿಕ ಹಾಗೂ ಆರ್ಥಿಕ ಪ್ರಗತಿ ವಿವರ

| ಕ್ರ. ಸಂ | ಲೆಕ್ಕ ಶೀರ್ಷಿಕೆ | ಕಾರ್ಯಕ್ರಮದ ವಿವರ | ನಿಗಧಿಪಡಿಸಿ ಬಿಡುಗಡೆ ಯಾದ ಅನುದಾನ (ರೂ. ಲಕ್ಷ ಗಳಲ್ಲಿ) | ಭೌತಿಕ ಪ್ರಗತಿ 2019-20 | ಆರ್ಥಿಕ ಪ್ರಗತಿ 2019-20 (ರೂ.ಲಕ್ಷ ಗಳಲ್ಲಿ) |
|---|---|---|---|---|---|
| 1 | 2205-00-104-0-26- ಕ್ರೀಡಾಕೂಟ ಮತ್ತು ರಾಲಿಗಳಲ್ಲಿ ಭಾಗವಹಿಸುವವರಿಗೆ ಪ್ರಯಾಣ /ದಿನಭತ್ಯೆ ಯೋಜನೆಯಡಿ | ಕ್ರೀಡಾಕೂಟ ಮತ್ತು ರಾಲಿಗಳಲ್ಲಿ ಭಾಗವಹಿಸುವವರಿಗೆ ಪ್ರಯಾಣ /ದಿನಭತ್ಯೆ ಯೋಜನೆಯಡಿಯಲ್ಲಿ ಒಟ್ಟು ರೂ.32.00 ಲಕ್ಷಗಳನ್ನು ಒದಗಿಸಲಾಗಿರುತ್ತದೆ. ಜಿಲ್ಲೆಯ 06 ತಾಲ್ಲೂಕುಗಳಲ್ಲಿ ತಾಲ್ಲೂಕು ಮಟ್ಟ ಮತ್ತು ಜಿಲ್ಲಾ ಮಟ್ಟದ ದಸರಾ ಕ್ರೀಡಾಕೂಟ ಸಂಘಟನೆ, ಜಿಲ್ಲಾ ಮಟ್ಟದಲ್ಲಿ ಯುವಜನಮೇಳ ಮತ್ತು ಯುವಜನೋತ್ಸವ ಕಾರ್ಯಕ್ರಮಗಳ ಸಂಘಟನೆ ಹಾಗೂ ಜಿಲ್ಲಾ ಮಟ್ಟದಲ್ಲಿ ರಾಜ್ಯ ಸರಕಾರಿ ನೌಕರರ ಕ್ರೀಡಾಕೂಟ ಸಂಘಟನೆಗಾಗಿ ವೆಚ್ಚ ಭರಿಸಲಾಗಿದೆ.<br>ಜಿಲ್ಲೆಯ ಕ್ರೀಡಾಪಟುಗಳು/ಸ್ಪರ್ಧಾಳುಗಳು ವಿವಿಧ ವಿಭಾಗ ಮತ್ತು ರಾಜ್ಯ ಮಟ್ಟದ ಕ್ರೀಡಾಕೂಟ/ ಕಾರ್ಯಕ್ರಮಗಳಲ್ಲಿ ಸದರಿಯವರಿಗೆ ಪ್ರಯಾಣ ಭತ್ಯೆ ಮತ್ತು ದಿನ ಭತ್ಯೆ ಯನ್ನು ವಿತರಿಸಲಾಗಿದೆ. ಗುಡಿಬಂಡೆ, ಚಿಂತಾಮಣಿ, ಶಿಡ್ಲಘಟ್ಟ, ಬಾಗೇಪಲ್ಲಿ, ಗೌರಿಬಿದನೂರು ತಾಲ್ಲೂಕಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚಿಕ್ಕಬಳ್ಳಾಪುರ ತಾಲ್ಲೂಕಿನ ಪದವಿ ಪೂರ್ವ ಕಾಲೇಜು ಜೀವನ ಕೌಶಲ್ಯ ತರಬೇತಿ ಶಿಬಿರ ಆಯೋಜಿಸಲಾಗಿದೆ. 2020-21 ನೇ ಸಾಲಿನ ಕ್ರೀಡಾ ವಸತಿ ನಿಲಯಕ್ಕೆ ಕ್ರೀಡಾಪಟುಗಳ ಆಯ್ಕೆ, 2019ರ ಲೋಕಸಭಾ ಚುನಾವಣಾ ಅಂಗವಾಗಿ ಸ್ವೀಪ್ ಕಾರ್ಯಕ್ರಮದಡಿ ಜಿಲ್ಲಾ ಮಟ್ಟದ ಹೊನಲು ಬೆಳಕಿನ ವಾಲಿಬಾಲ್ ಪಂದ್ಯಾವಳಿ, ಸ್ವಾಮಿ ವಿವೇಕಾನಂದ ಜಯಂತಿ ಆಚರಣೆ, ರಾಜ್ಯ ಸರ್ಕಾರಿ ನೌಕರರ ಕ್ರೀಡಾಕೂಟ ಸಂಘಟನೆಗೆ ವೆಚ್ಚ ಭರಿಸಲಾಗಿದೆ. | 32.00 | 27 | 30.96 |
| | | ಮುಂದುವರಿದು ಗುಡಿಬಂಡೆ ಕೆರೆಯಲ್ಲಿ ಜಲ ಸಾಹಸ ಮತ್ತು ವರ್ಲಕೊಂಡ ಬೆಟ್ಟದಲ್ಲಿ ಭೂ ಸಾಹಸ ಕ್ರೀಡೆಗಳ ಆಯೋಜನೆಗಾಗಿ ರೂ.5.00 ಲಕ್ಷಗಳ ಮೊತ್ತವನ್ನು ಮಹಾ ನಿರ್ದೇಶಕರು, ಜನರಲ್ ತಿಮ್ಮಯ್ಯ ಸಾಹಸ ಅಕಾಡೆಮಿ ಬೆಂಗಳೂರು ಇವರಿಗೆ ಪಾವತಿಸಲಾಗಿದೆ | | | |
| 2 | 2205-00-104-0-27 ಅಧಿಕಾರಿ ಮತ್ತು ಸಿಬ್ಬಂದಿಯವರ ವೇತನ | ಅಧಿಕಾರಿ ಮತ್ತು ಸಿಬ್ಬಂದಿಯವರ ವೇತನ, ಗಳಿಕೆ ರಜೆ ನಗದೀಕರಣ ಹಾಗೂ ತುಟ್ಟಿಭತ್ಯೆಗಾಗಿ ವೆಚ್ಚ ಭರಿಸಲಾಗಿದೆ. | 16.00 | 03 | 14.84 |

--2)

| 3 | 2205-00-104-0-27 ಕಚೇರಿ ವೆಚ್ಚ | ದೂರವಾಣಿ ವೆಚ್ಚ, ಅಂಚೆ ಚೀಟಿ, ಲೇಖನ ಸಾಮಾಗ್ರಿ ಹಾಗೂ ವಾಹನದ ಬಾಡಿಗೆ ಮುಂತಾದವುಗಳಿಗಾಗಿ ವೆಚ್ಚ ಭರಿಸಲಾಗಿದೆ. | 3.67 | 01 | 3.60 |
|---|---|---|---|---|---|
| 4 | 2205-00-104-0-28 ಕ್ರೀಡಾಂಗಣ ನಿರ್ಮಾಣ/ನಿರ್ವಹಣೆ | ಕ್ರೀಡಾಂಗಣಗಳ ನಿರ್ವಹಣೆ ಮತ್ತು ಸಣ್ಣ ಕಾಮಗಾರಿಗಳ ಯೋಜನೆಯಡಿಯಲ್ಲಿ ಒಟ್ಟು ರೂ.53.21 ಲಕ್ಷಗಳನ್ನು ಒದಗಿಸಲಾಗಿರುತ್ತದೆ. ಅದರಲ್ಲಿ ಜಿಲ್ಲಾ ಕ್ರೀಡಾಂಗಣದಲ್ಲಿ ಕಾರ್ಯನಿರ್ವಹಿಸುತ್ತಿರುವ ಹಗಲು/ರಾತ್ರಿ ಕಾವಲುಗಾರರ ಸಂಚಿತ ವೇತನ, ಹೊರಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ಕಂಪ್ಯೂಟರ್ ಆಪರೇಟರ್, ಮಾರ್ಕರ್, ಸ್ವಚ್ಛತಾಗಾರರ ವೇತನ, ಒಳಾಂಗಣ ಕ್ರೀಡಾಂಗಣದಲ್ಲಿ ಕಾರ್ಯನಿರ್ವಹಿಸುತ್ತಿರುವ ಮೇಲ್ವಿಚಾರಕರು ಹಾಗೂ ಸ್ವಚ್ಛತಾಗಾರರ ವೇತನ ಪಾವತಿಸಲಾಗಿದೆ. ಗೌರಿಬಿದನೂರು ತಾಲ್ಲೂಕು ಕ್ರೀಡಾಂಗಣದ ಹಗಲು ಮತ್ತು ರಾತ್ರಿ ಕಾವಲುಗಾರರ ಹಾಗೂ ಸ್ವಚ್ಛತಾಗಾರರ ವೇತನ, ಬಾಗೇಪಲ್ಲಿ ತಾಲ್ಲೂಕು ಕ್ರೀಡಾಂಗಣದಲ್ಲಿ ಹಗಲು ಮತ್ತು ರಾತ್ರಿ ಕಾವಲುಗಾರರ ವೇತನ, ಶಿಡ್ಲಘಟ್ಟ ತಾಲ್ಲೂಕು ಕ್ರೀಡಾಂಗಣದಲ್ಲಿ ಹಗಲು ಮತ್ತು ರಾತ್ರಿ ಕಾವಲುಗಾರರ ವೇತನ,<br><br>ಜಿಲ್ಲಾ ಮತ್ತು ತಾಲ್ಲೂಕು ಕ್ರೀಡಾಂಗಣಗಳ ವಿದ್ಯುತ್ ಬಿಲ್ ಹಾಗೂ ಸ್ವಚ್ಛತಾ ಸಾಮಗ್ರಿ ಹಾಗೂ ನಿರ್ವಹಣೆಗಳಿಗಾಗಿ ಹಾಗೂ ಜಿಲ್ಲಾ ಕ್ರೀಡಾಂಗಣದ ಕಚೇರಿಗೆ ಒಂದು ಕಂಪ್ಯೂಟರ್ ಹಾಗೂ ಜೆರಾಕ್ಸ್ ಯಂತ್ರದ ಖರೀದಿ , ಶಿಡ್ಲಘಟ್ಟ, ಬಾಗೇಪಲ್ಲಿ ಹಾಗೂ ಗೌರಿಬಿದನೂರು ಕ್ರೀಡಾಂಗಣಗಳ ಫೆವಿಲಿಯನ್ ಕಟ್ಟಡಕ್ಕೆ ಸುಣ್ಣ ಮತ್ತು ಬಣ್ಣ ಹಾಗೂ 2017-18 ರಲ್ಲಿ ರೂ.12.00 ಲಕ್ಷ ಹಾಗೂ 2018-19 ರಲ್ಲಿ ರೂ.13.00 ಲಕ್ಷ ಒಟ್ಟು ರೂ.25.00ಲಕ್ಷಗಳಲ್ಲಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ ಚಿಕ್ಕಬಳ್ಳಾಪುರ ಇವರಿಂದ ಸರ್,ಎಂ,ವಿ ಜಿಲ್ಲಾ ಕ್ರೀಡಾಂಗಣದಲ್ಲಿ ಕಬಡ್ಡಿ ಅಂಕಣ ನಿರ್ಮಿಸಲಾಗಿದೆ. | 53.21 | 42 | 53.16 |
| 5 | 2205-00-104-0-29 ಕ್ರೀಡಾ ಶಾಲೆ | ಕ್ರೀಡಾಶಾಲೆ/ವಸತಿ ನಿಲಯಗಳು ಯೋಜನೆಡಿಯಲ್ಲಿ ಒಟ್ಟು ರೂ.14.00 ಲಕ್ಷಗಳನ್ನು ಒದಿಗಿಸಲಾಗಿರುತ್ತದೆ. ಕ್ರೀಡಾ ವಸತಿ ಶಾಲೆ/ನಿಲಯದಲ್ಲಿ 5ನೇ ತರಗತಿಯಿಂದ 7ನೇ ತರಗತಿಯವರೆಗೆ 36 ಬಾಲಕರು ಕಾಲ್ಚೆಂಡು (ಫುಟ್ಬಾಲ್) ಹಾಗೂ ಹಾಕಿ ಕ್ರೀಡೆಗಳಲ್ಲಿ ಇಲಾಖಾ ತರಬೇತುದಾರರಿಂದ ತರಬೇತಿಯನ್ನು ಪಡೆಯುತ್ತಿದ್ದಾರೆ. ಮುಂದುವರೆದು ಓರ್ವ ವೈದ್ಯರು, ಓರ್ವ ಕಾಲ್ಚೆಂಡು(ಫುಟ್ಬಾಲ್) ತರಬೇತುದಾರರು, ಇಬ್ಬರೂ ಭೋಧಕರು, ಓರ್ವ ಕೇರ್ ಟೇಕರ್, ಓರ್ವ ಕಾವಲುಗಾರರು, ಓರ್ವ ಬಟ್ಟೆ ಶುಚಿ ಮಾಡುವವರ ವೇತನ ಹಾಗೂ ಹೇರ್ ಕಟಿಂಗ್, ಕ್ರೀಡಾಪಟುಗಳಿಗೆ ಟ್ರ್ಯಾಕ್ ಸೂಟ್, ಸೊಳ್ಳಪರದೆ, ಕ್ಯಾಪ್, ಸ್ವೆಟರ್, ಟವಲ್ ಬೆಡ್ ಸ್ಪ್ರೆಡ್, ಶೂ ಮತ್ತು ಚಪ್ಪಲಿಗಳ ಖರೀದಿ, ಕ್ರೀಡಾ ಸಾಮಗ್ರಿಗಳ ಖರೀದಿ, 4 ಫೀಟ್ ಅಲ್ಮೇರಾ ಖರೀದಿ, ಕ್ರೀಡಾಪಟುಗಳಿಗೆ ಸ್ಕೂಲ್ ಬ್ಯಾಗ್, ವಾಟರ್ ಫಿಲ್ಟರ್, ವಾಷಿಂಗ್ ಮೆಷಿನ್ ಖರೀದಿ ಹಾಗೂ ಒಳಾಂಗಣ ಕ್ರೀಡಾಂಗಣದ ಮೇಲ್ಛಾವಣಿ ದುರಸ್ಥಿ ಇನ್ನಿತರೆ ಕಾರ್ಯಗಳಿಗೆ ವೆಚ್ಚ ಭರಿಸಲಾಗಿದೆ. | 14.00 | 12 | 13.98 |

| 6 | 2205-00-104-0-31 ಗ್ರಾಮೀಣ ಕ್ರೀಡಾ ಕೇಂದ್ರಗಳು | ಗ್ರಾಮೀಣ ಕ್ರೀಡಾ ಕೇಂದ್ರಗಳು ಯೋಜನೆ ಅಡಿಯಲ್ಲಿ ಒಟ್ಟು ರೂ.12.00ಲಕ್ಷಗಳನ್ನು ಒದಗಿಸಲಾಗಿರುತ್ತದೆ.<br>ಸದರಿ ಮೊತ್ತಕ್ಕೆ ಮಾನ್ಯ ಜಿಲ್ಲಾ ಪಂಚಾಯತ್ ಅಧ್ಯಕ್ಷರು, ಉಪಾಧ್ಯಕ್ಷರು ಹಾಗೂ ಮಾನ್ಯ ಸದಸ್ಯರುಗಳ ಕಾರ್ಯವ್ಯಾಪ್ತಿಗೆ ಒಳಪಡುವ 2 ಸರ್ಕಾರಿ ಶಾಲೆಗಳಿಗೆ ಕ್ರೀಡಾ ಸಲಕರಣೆಗಳು ಹಾಗೂ ಒಂದು ನೊಂದಾಯಿತ ಯುವಕ/ಯುವತಿ ಸಂಘಗಳಿಗೆ ಕ್ರೀಡಾಸಾಮಾಗ್ರಿಗಳನ್ನು ಇ-ಪ್ರೊಕ್ಯೂರ್ ಮೆಂಟ್ ಟೆಂಡರ್ ಮೂಲಕ ಶ್ರೀ ರಮೇಶ್ ಮೂರ್ತಿ, ಮೈಸೂರು & ಚಾಮರಾಜನಗರ ಜಿಲ್ಲೆ ಇಂಡಸ್ಟ್ರಿಯಲ್ ಸಪ್ಲೈ & ಮಾರ್ಕೆಟಿಂಗ್ ಕೋ-ಅಪರೇಟಿವ್ ಲೀ. ಮೈಸೂರು ರವರಿಂದ ಖರೀದಿಸಿ ನೀಡಲಾಗಿದೆ. | 12.00 | 1 | 12.00 |
|---|---|---|---|---|---|
| 7 | 2205-00-104-0-32 ವಿದ್ಯಾರ್ಥಿ ಮತ್ತು ವಿದ್ಯಾರ್ಥಿಯೇತರರಿಗೆ ಸಹಾಯ | ವಿದ್ಯಾರ್ಥಿ ಮತ್ತು ವಿದ್ಯಾರ್ಥಿಯೇತರರಿಗೆ ಸಹಾಯ ಯೋಜನೆ ಅಡಿಯಲ್ಲಿ ಒಟ್ಟು ರೂ.3.67 ಲಕ್ಷಗಳನ್ನು ಒದಗಿಸಲಾಗಿರುತ್ತದೆ.<br>ಸದರಿ ಮೊತ್ತಕ್ಕೆ ಇಲಾಖೆಯಲ್ಲಿ ನೊಂದಾಯಿತ 36 ಯುವಕ/ಯುವತಿ<br>ಸಂಘಗಳಿಗೆ ಕ್ರೀಡಾಸಲಕರಣೆಗಳನ್ನು ಇ-ಪ್ರೊಕ್ಯೂರ್ ಮೆಂಟ್ ಟೆಂಡರ್ ಮೂಲಕ ಶ್ರೀ ರಮೇಶ್ ಮೂರ್ತಿ, ಮೈಸೂರು & ಚಾಮರಾಜನಗರ ಜಿಲ್ಲೆ ಇಂಡಸ್ಟ್ರಿಯಲ್ ಸಪ್ಲೈ & ಮಾರ್ಕೆಟಿಂಗ್ ಕೋ-ಅಪರೇಟಿವ್ ಲೀ. ಮೈಸೂರು ರವರಿಂದ ಖರೀದಿಸಿ ನೀಡಲಾಗಿದೆ . | 3.67 | 1 | 3.67 |
| 8 | 2205-00-104-0-33 ಕ್ರೀಡಾ ಸಾಮಗ್ರಿ ಕೊಳ್ಳಲು | ಕ್ರೀಡಾ ಸಾಮಗ್ರಿಗಳನ್ನು ಕೊಳ್ಳಲು ಮತ್ತು ಆಟದ ಮೈದಾನಗಳ ಅಭಿವೃದ್ಧಿ ಪಡಿಸಲು ಶೈಕ್ಷಣಿಕ ಮತ್ತು ಇತರೆ ಸಂಸ್ಥೆಗಳಿಗೆ ಸಹಾಯ ಯೋಜನೆಯಡಿ ರೂ.2.45 ಲಕ್ಷಗಳನ್ನು ಒದಗಿಸಲಾಗಿರುತ್ತದೆ. ಸದರಿ ಮೊತ್ತದಲ್ಲಿ ಬಾಗೇಪಲ್ಲಿ ತಾಲ್ಲೂಕಿನ ಪ್ರಥಮ ದರ್ಜೆ ಕಾಲೇಜು ಮತ್ತು ಗೌರಿಬಿದನೂರು ತಾಲ್ಲೂಕಿನ ನ್ಯಾಷನಲ್ ಕಾಲೇಜಿನಲ್ಲಿ ಜಾನಪದ ಕಲೆಗಳ ತರಬೇತಿ ಶಿಬಿರವನ್ನು ಏರ್ಪಡಿಸಲಾಗಿದ್ದು, ಶಿಬಿರದಲ್ಲಿ ತಮಟೆ, ಜಾನಪದ ಗಾಯನ, ಡೊಳ್ಳುಕುಣಿತ, ಕೋಲಾಟ ಹಾಗೂ ಪಟ್ಟದ ಕುಣಿತಗಳನ್ನು ಬೆಂಗಳೂರು ವಿಶ್ವವಿದ್ಯಾಲಯ ಪ್ರದರ್ಶನ ಕಲೆಗಳಲ್ಲಿ ಸ್ನಾತಕೋತರ ಪದವಿ ಪಡೆದ ತರಬೇತುದಾರರಿಂದ ತರಬೇತಿಯನ್ನು ನೀಡಲಾಗಿದೆ. | 2.45 | 1 | 2.40 |
| 9 | 2205-00-104-0-35 ಗ್ರಾಮಾಂತರ ಪ್ರದೇಶದಲ್ಲಿ ಕ್ರೀಡೆಗಾಗಿ ಪ್ರೋತ್ಸಾಹ | ಗ್ರಾಮಾಂತರ ಪ್ರದೇಶದಲ್ಲಿ ಕ್ರೀಡೆಗಾಗಿ ಪ್ರೋತ್ಸಾಹ ಯೋಜನೆಡಿಯಲ್ಲಿ ರೂ.1.22ಲಕ್ಷ ಗಳನ್ನು ಒದಗಿಸಲಾಗಿರುತ್ತದೆ. ಕ್ರೀಡಾ/ಸಾಂಸ್ಕೃತಿಕ ಸಲಕರಣೆಗಳನ್ನು ಇ-ಪ್ರೊಕ್ಯೂರ್ ಮೆಂಟ್ ಟೆಂಡರ್ ಮೂಲಕ ಶ್ರೀ ರಮೇಶ್ ಮೂರ್ತಿ, ಮೈಸೂರು & ಚಾಮರಾಜನಗರ ಜಿಲ್ಲೆ ಇಂಡಸ್ಟ್ರಿಯಲ್ ಸಪ್ಲೈ& ಮಾರ್ಕೆಟಿಂಗ್ ಕೋ-ಅಪರೇಟಿವ್ ಲೀ. ಮೈಸೂರು ರವರಿಂದ ಖರೀದಿಸಿ ನೀಡಲಾಗಿದೆ | 1.22 | 1 | 1.22 |

--4)

| | | | | | |
|---|---|---|---|---|---|
| ) | 2205-00-104-0-36 ಕ್ರೀಡಾ ಸಾಮಗ್ರಿ ಖರೀದಿ | ಕ್ರೀಡಾ ಸಾಮಗ್ರಿ ಖರೀದಿಗಾಗಿ ಜಿಲ್ಲಾ ಮತ್ತು ವಿಭಾಗೀಯ ಯುವಜನ ಸೇವಾ ಮಂಡಳಿಗಳಿಗೆ ಸಹಾಯ ಯೋಜನೆಡಿಯಲ್ಲಿ ರೂ.1.22 ಲಕ್ಷಗಳನ್ನು ಒದಗಿಸಲಾಗಿರುತ್ತದೆ. ಜಿಲ್ಲಾ ಕ್ರೀಡಾಂಗಣದಲ್ಲಿ ಬರುವ ದೈನಂದಿನ ಕ್ರೀಡಾಪಟುಗಳಿಗೆ ಕ್ರೀಡಾ ಸಲಕರಣೆಗಳನ್ನು ಶ್ರೀ ರಮೇಶ್ ಮೂರ್ತಿ, ಮೈಸೂರು & ಚಾಮರಾಜನಗರ ಜಿಲ್ಲೆ ಇಂಡಸ್ಟ್ರಿಯಲ್ ಸಪ್ಲೈ& ಮಾರ್ಕೆಟಿಂಗ್ ಕೋ-ಅಪರೇಟಿವ್ ಲೀ. ಮೈಸೂರು ರವರಿಂದ ಖರೀದಿಸಿ ನೀಡಲಾಗಿದೆ. | 1.22 | 1 | 1.22 |